# ಕನಕದಾಸ

(ನಾಟಕ)



ಜೋಳದರಾಶಿ ದೊಡ್ಡನಗೌಡ

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಬೆಂಗಳೂರು
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

# ಕನಕದಾಸ

## ನಾಟಕ

ಗ್ರಂಥಕರ್ತರು:
ಗಮಕ ಕಲಾನಿಧಿ
ಜೋಳದರಾಸಿ ಕೆ. ದೊಡ್ಡನಗೌಡರು

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ಬೆಂಗಳೂರು

**Kanakadasa – (Drama) written by Joladarasi doddanagowda Re-printed by National Saint poet kanakadasa study and research centre, Bengaluru - 560 002**

| | | |
|---|---|---|
| ಲೇಖಕರು | : | ಶ್ರೀ ಜೋಳದರಾಸಿ ಕೆ. ದೊಡ್ಡನಗೌಡ |
| ಮೂಲ ಹಕ್ಕುದಾರರು | : | ಶ್ರೀ ರಾಮೇಶ ಟ್ರಸ್ಟ್ ಕಮಿಟಿ<br>ಜೋಳದರಾಸಿ ಬಳ್ಳಾರಿ ಜಿಲ್ಲೆ |
| ಕಾರ್ಯಕಾರಿ ಪ್ರಕಾಶಕರು | : | ಶ್ರೀ ಮಹದೇವಯ್ಯ<br>ಆಡಳಿತಾಧಿಕಾರಿ<br>ಕನ್ನಡ ಪುಸ್ತಕ ಪ್ರಾಧಿಕಾರ<br>ಕನ್ನಡ ಭವನ, ಬೆಂಗಳೂರು |
| ಮರುಮುದ್ರಣ | : | ಶ್ರೀ ವಿ ಎನ್ ಮಲ್ಲಿಕಾರ್ಜುನ ಸ್ವಾಮಿ<br>ಸದಸ್ಯ-ಕಾರ್ಯದರ್ಶಿ<br>ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು<br>ಸಂಶೋಧನಾ ಕೇಂದ್ರ, ಬೆಂಗಳೂರು<br>ದೂ: 080-22113147<br>Web-Site : www.saintpoetkanaka.in<br>Email:kanakaresearchcentre@gmail.com |
| ಮೊದಲ ಮುದ್ರಣ | : | 1965 |
| ಎರಡನೇ ಮುದ್ರಣ | : | 2016 |
| ಪುಟಗಳು | : | 112 |
| ಪ್ರತಿಗಳು | : | 500 |
| ಈ ಆವೃತ್ತಿಯ ಹಕ್ಕುಗಳು | : | ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು<br>ಸಂಶೋಧನಾ ಕೇಂದ್ರ, ಬೆಂಗಳೂರು |
| ಆಕಾರ | : | 1/8 ಡೆಮ್ಮಿ |
| ಬೆಲೆ | : | ರೂ. 50/- |
| ಪುಸ್ತಕಗಳು ದೊರಕುವ ಸ್ಥಳ | : | ಕನ್ನಡ ಪುಸ್ತಕ ಪ್ರಾಧಿಕಾರ |
| ಒಳಪುಟ ಕಾಗದ | : | 70 ಜಿ.ಎಸ್.ಎಂ. ಎನ್.ಎಸ್.ಮ್ಯಾಪ್ಲಿತೊ |
| ರಕ್ಷಾಪುಟದ ಕಲಾವಿದರು | : | ಮೂಲ: ಶ್ರೀ ಕೊಂಡಾಚಾರಿ |
| ವಿನ್ಯಾಸ | : | ಶ್ರೀ ಮುರಳೀಧರ್ ವಿ ರಾಥೋಡ್ |
| ಮುದ್ರಕರು | : | ಸಿರಿವರ ಪ್ರಕಾಶನ<br>ಎಂ 37/ಬಿ, 8ನೆಯ ಅಡ್ಡರಸ್ತೆ,<br>ಲಕ್ಷ್ಮೀನಾರಾಯಣ ಪುರ,<br>ಬೆಂಗಳೂರು -21<br>ಮೊ: 9844101906 |

## ನಿವೇದನೆ
## (ಮೊದಲ ಮುದ್ರಣದ ಮುನ್ನುಡಿ)

ನಾಟಕಕ್ಕೆ ನಟರು ನೋಟಕರೇ ಮುನ್ನುಡಿಯಾದುದರಿಂದ ಈ ನಾಟಕದ ಬಗ್ಗೆ ನಾನೇನೂ ಹೇಳಬಯಸುವುದಿಲ್ಲ. ಆದರೆ ರಚನೆ–ಪ್ರದರ್ಶನಗಳ ಬಗ್ಗೆ ಒಂದೆರಡು ಮಾತು ಹೇಳಬಯಸುವೆ.

1940 ರಲ್ಲಿ ನಾಟ್ಯಗುರು ಟಿ. ರಾಘವರು ಒದಗಿಸಿದ ಕಥಾನಕದಂತೆ ಈ ನಾಟಕ ರಚನೆಯಾಗಿ ಅವರ ಸಲಹೆಗಳಂತೆ ಪ್ರದರ್ಶನಕ್ಕಿಳಿದು ಆರ್ಟ್ ಲವರ್ಸ್‌ಲೀಗ್ ಮತ್ತು ಮಲ್ಲಸಜ್ಜನ ವ್ಯಾಯಾಮ ಶಾಲೆ ಬಳ್ಳಾರಿ, ವೈ. ಎಂ. ಚಂದ್ರಯ್ಯನವರು ಸಿಡಿಗಿನಮಳೆ, ಜೋಳದರಾಸಿ ನಾಟ್ಯ ಕಲೋಪಾಸಕ ಮಂಡಳಿ, ಇವರ ನೆರವಿನಿಂದ ನಾಡಿನ ವಿವಿಧಸಂಸ್ಥೆಗಳ ಸಹಾಯಾರ್ಥವಾಗಿ ಅನೇಕ ಸಲ ಅಭಿನಯಿಸಲ್ಪಟ್ಟು ಕಲಾಸೇವೆ, ಜನಸೇವೆಗೆ ಉಪಯೋಗವಾಯಿತು. ಕೇವಲ ಕಲಾಸೇವೆಯ ಆನಂದವೇ ಪ್ರತಿಫಲವಾಗಿ ಪರಿಣಮಿಸಿದ್ದರಿಂದ ಈ ನಾಟಕವು ಮುದ್ರಣವಾಗದೆ ಕಾಲುಶತಮಾನ ನಿರೀಕ್ಷಿಸಬೇಕಾಯಿತು.

ಈ ನಾಟಕವಲ್ಲದೆ ತುಕಾರಾಮ, ಮಾಯಾಪ್ರಭಾವ, ಶಿವನಾಣೆ, ಕ್ರಾಂತಿಪುರುಷ ಬಸವಣ್ಣ ನಾಟಕಗಳು ರಚನೆಯಾಗಿ ರಂಗಭೂಮಿಯಲ್ಲಿ ಅಭಿನಯಿಸಲ್ಪಟ್ಟವು. 1948 ರಲ್ಲಿ ಬಳ್ಳಾರಿ ಜಿಲ್ಲಾ ಕನ್ನಡ ನಾಟಕ ಕಲಾಪರಿಷತ್ ವತಿಯಿಂದ ಕ್ರಾಂತಿಪುರುಷ ಬಸವಣ್ಣ ನಾಟಕವು ಹಲವಾರು ಸಲ ಅಭಿನಯಿಸಲ್ಪಟ್ಟಿತು. ಈ ನಾಟಕಗಳನ್ನು ರಂಗಭೂಮಿಯ ಒರೆಗಲ್ಲಿಗಿಕ್ಕಿ ತಿಕ್ಕಿತೀಡಿ ಪ್ರಯೋಗ ಶುದ್ಧಿಯನ್ನು ಗಳಿಸಿಕೊಳ್ಳಲೆಂಬ ಹಂಬಲದಿಂದಲೂ ಬರೆದಕೂಡಲೆ ಮುದ್ರಿಸುವ ಸಾಹಿತ್ಯ ನಾಟಕ ಸಾಹಿತ್ಯವಲ್ಲವೆಂಬ ನಂಬಿಕೆಯಿಂದಲೂ ಆತುರಗೊಂಡು ಇದುವರೆಗೂ ನಾಟಕಗಳ ಮುದ್ರಣದ ಕಾರ್ಯಕ್ಕೆ ಕೈಯಿಕ್ಕಿರಲಿಲ್ಲ. ಆದರೆ ಇತ್ತೀಚೆಗೆ ಒಂದು ನಿಶ್ಚಯಕ್ಕೆ ಬಂದು ಮುದ್ರಿಸಬೇಕೆಂದು ಪ್ರಯತ್ನಿಸುತ್ತಿರುವಾಗ ನಾಡಿನ ರಂಗಭೂಮಿಯಲ್ಲಿ ವಿಲಕ್ಷಣ ತೀವ್ರ ವ್ಯತ್ಯಾಸಗಳಾದುದು ಕಂಡುಬಂದದ್ದರಿಂದ, ನನ್ನ ನಾಟಕಗಳು ಇಂದಿನ ರಂಗಭೂಮಿಗೆ ನಿರುಪಯುಕ್ತವೆಂದೆನಿಸಿದ್ದರಿಂದ, ನನ್ನೊಂದಿಗೆ ಅಭಿನಯಿಸುತ್ತಿದ್ದ ನಾಟ್ಯಬಂಧುಗಳು ಒಬ್ಬೊಬ್ಬರೇ ಕಾಲವಶವಾಗುತ್ತ ಬಂದದ್ದರಿಂದ, ನಾಟಕಾಭಿನಯದಲ್ಲಿಯೂ ನಾಟಕ ರಚನೆಯಲ್ಲಿಯೂ ನಿರುತ್ಸಾಹಗೊಂಡಿದ್ದೆ.

ಕಾಲದಲ್ಲಿ ಸಾಧ್ಯಾಸಾಧ್ಯಗಳ ಬಗ್ಗೆ ವಿಚಿತ್ರ ಶಕ್ತಿ ಇದೆ ಎಂಬುದು ಈ ನಾಟಕ ಪ್ರಕಾಶನದಿಂದ ವ್ಯಕ್ತವಾಗಿದೆ. ದೇಶದಾದ್ಯಂತ ಕವಿ, ಭಕ್ತ ಕನಕದಾಸರ ನಾಲ್ಕನೇ ಶತಮಾನೋತ್ಸವವನ್ನು ಆಚರಿಸುತ್ತಿರುವ ಈ ನಾಟಕದ ಕಾಲು ಶತಮಾನದ ನಿರೀಕ್ಷೆಯು ಉತ್ಸಾಹಗೊಳ್ಳುವಂತೆ ಬಳ್ಳಾರಿಯ 'ಕನಕದಾಸರ ನಾಲ್ಕನೇ ಶತಮಾನೋತ್ಸವ ಸಮಿತಿ'ಯವರು ಕಲಾಭಿಮಾನಿಗಳಾಗಿ ಸಹೃದಯರಾಗಿ ಈ ನಾಟಕದ ಅಭಿನಯಕ್ಕೆ ಪ್ರೋತ್ಸಾಹವಿತ್ತುದರಿಂದ ನನ್ನ ನಿರುತ್ಸಾಹಕ್ಕೆ ಮಹೋತ್ಸವವನ್ನಿತ್ತಂತಾಯಿತು. ಅವರೆಲ್ಲರಿಗೂ ನಾನತ್ಯಂತ ಋಣಿಯಾಗಿರುವೆ.

ಈ ನಾಟಕಕ್ಕೆ ಪ್ರಶಂಸನೀಯವಾದ ಪ್ರೇಕ್ಷಕರ ಮೆಚ್ಚಿಕೆಗೆ ಪಾತ್ರವಾದ ಪದ್ಯಗಳನ್ನು ಬರೆದುಕೊಟ್ಟ ಪಂಡಿತ, ಶ್ರೀ ವೈ. ನಾಗೇಶಶಾಸ್ತ್ರಿಗಳ ಉಪಕಾರವು ಸ್ಮರಣೀಯವಾದುದು. ರಾಘವರೊಂದಿಗೆ, ನನ್ನೊಂದಿಗೆ ಜೀವನದ ಕೊನೆಯವರೆಗೂ ನಾಟಕ – ಗಮಕಕಲೆಗಳಿಗೆ ದೈವದತ್ತವಾದ ಪ್ರತಿಭೆಯಿಂದ ಹಾರ್ಮನಿಯಂ ನುಡಿಸುತ್ತ, ಈ ನಾಟಕದ ಯಶಸ್ಸಿಗೆ ಅನುಗುಣವಾದ ಸಂಗೀತವನ್ನೊದಗಿಸಿಕೊಟ್ಟ ನನ್ನ ಗೆಳೆಯ ಶಿವೈಕ್ಯ ಟಿ. ಕುಮಾರಸ್ವಾಮಿಯವರ ಸಹಕಾರವನ್ನು ಎಂದೂ ಮರೆಯಲಾರೆ. ನನ್ನ ಕಲಾಸೇವೆಗೆ ಮೊದಲಿನಿಂದಲೂ ಅತ್ಯಂತ ಉತ್ಸಾಹವಿತ್ತ ಮಾನ್ಯ ಶ್ರೀ ವೈ. ಮಹಾಬಲೇಶ್ವರಪ್ಪನವರನ್ನು, ಭಾಸ್ಕರಾಚಾರ್ಯ ರಾಮಚಂದ್ರ ಸ್ವಾಮಿಗಳನ್ನು, ಮತ್ತು ನನ್ನಲ್ಲಿ ರಾಘವರ ಸ್ಮಾರಕ ಸವಿನೆನಪನ್ನು ಕಂಡು ಆದರಿಸುತ್ತಿರುವ ಶ್ರೀ ಡಿ. ವೇಣುಗೋಪಾಲಾಚಾರ್ಯರನ್ನು ನೆನೆಯದಿರಲಾರೆ. ಹೊಸಬರಾದರೂ ಹಳಬರಂತೆ ಪ್ರೀತಿಯನ್ನು ತೋರಿ ಈ ನಾಟಕಾಭಿನಯಕ್ಕೆ ಪ್ರೋತ್ಸಾಹವಿತ್ತ ಶ್ರೀ ಡಿ. ಎಸ್. ರಾಘವೇಂದ್ರಾಚಾರ್ ಬಳ್ಳಾರಿ ಜಿಲ್ಲಾ ಡೆಪ್ಯೂಟಿ ಕಮಿಷನರ್ ಇವರಿಗೆ ಕೃತಜ್ಞನಾಗಿರುವೆ.

ಈ ಪುಸ್ತಕಕ್ಕೆ ಸುಂದರ ಮುಖಚಿತ್ರವನ್ನು ಒದಗಿಸಿಕೊಟ್ಟ ಶ್ರೀ ಕೊಂಡಾಚಾರಿಯವರಿಗೂ, ಮುದ್ರಣ ಕಾರ್ಯದಲ್ಲಿ ಉಚಿತ ಸಲಹೆಗಳಿತ್ತು ಸಹಕರಿಸಿದ ಗೆಳೆಯ ಶ್ರೀ ಶಿ.ವ. ಚೆನ್ನಬಸವೇಶ್ವರರಿಗೂ, ಅಲ್ಪಾವಧಿಯಲ್ಲೇ ಅಂದವಾಗಿ ಮುದ್ರಿಸಿಕೊಟ್ಟ ಸ್ವರ ಪ್ರಿಂಟಿಂಗ್ ಪ್ರೆಸ್ಸಿನವರಿಗೂ ನನ್ನ ನೆನೆಕೆಗಳು.

**ಜೋಳದರಾಸಿ ಕೆ. ದೊಡ್ಡನಗೌಡ**

## ಅಧ್ಯಕ್ಷರ ನುಡಿ

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಕನಕದಾಸರ ಜೀವನ ದರ್ಶನ ಮತ್ತು ಅವರ ಕಾವ್ಯ-ಕೀರ್ತನೆಗಳ ಕುರಿತು ಅಧ್ಯಯನ, ಸಂಶೋಧನೆ, ಪ್ರಕಟಣೆ ಮತ್ತು ಪ್ರಸಾರ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಈ ಬಗೆಯ ಕಾರ್ಯಾಧ್ಯಯನಗಳಿಗೆ ಯುವ ಸಮುದಾಯವನ್ನು ತೊಡಗಿಸಿಕೊಳ್ಳುವುದು ಇದರ ಆಶಯವಾಗಿದೆ. ಈ ನೆಲೆಯಲ್ಲಿ ಹೊಸ ಹೊಸ ದೃಷ್ಟಿಕೋನದಿಂದ ಅಧ್ಯಯನಶೀಲ ವಿದ್ವಾಂಸ, ಸಂಶೋಧನಾರ್ಥಿಗಳಿಗೆ ಫೆಲೋಶಿಪ್ ನೀಡಿಕೆ, ಅಧ್ಯಯನಗಳಿಗೆ ಅನುದಾನ, ರಾಜ್ಯ-ರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣ-ಸಂವಾದಗೋಷ್ಠಿಗಳ ಏರ್ಪಾಟು, ವಿವಿಧ ಮಾಧ್ಯಮಗಳಲ್ಲಿ ಕನಕದಾಸರ ತತ್ವಾದರ್ಶಗಳ ಪ್ರದರ್ಶನ-ಪ್ರಸಾರ ಕಾರ್ಯ, ವಿವಿಧ ಭಾಷೆಗಳಿಗೆ ಕನಕದಾಸರ ಸಮಗ್ರ ಸಾಹಿತ್ಯ ಅನುವಾದ, ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು, ಕರ್ನಾಟಕ ತತ್ವಪದಕಾರರ ಸಮಗ್ರ ಸಾಹಿತ್ಯ ಪ್ರಕಟಣೆ, ಯುವಜನ-ವಿದ್ಯಾರ್ಥಿ ಸಮುದಾಯಕ್ಕಾಗಿ ಕನಕ ಸಂಸ್ಕೃತಿ ಕಮ್ಮಟ-ರಸಗ್ರಹಣ ಶಿಬಿರಗಳ ಸಂಘಟನೆ, ಹಿರಿಯ ಹಾಗೂ ಯುವ ವಿದ್ವಾಂಸರಿಗೆ ಪುರಸ್ಕಾರ ಮುಂತಾದ ಹಲವಾರು ರಚನಾತ್ಮಕ ಯೋಜನೆಗಳನ್ನು ರೂಪಿಸಿಕೊಂಡು ಜಾರಿಗೊಳಿಸುತ್ತಿದೆ.

ಕನಕದಾಸರನ್ನು ಕುರಿತು ಹಲವು ನೆಲೆಯಲ್ಲಿ ಅಧ್ಯಯನ ಮಾಡುವ ಅಗತ್ಯವನ್ನು ಮನಗಂಡಿರುವ ಅಧ್ಯಯನ ಕೇಂದ್ರವು ಗಮಕ ಕಲಾನಿಧಿ ಜೋಳದರಾಶಿ ದೊಡ್ಡನಗೌಡರ 'ಕನಕದಾಸ' ಕೃತಿಯನ್ನು ಪ್ರಕಟಿಸುತ್ತಿದೆ.

ಜೋಳದರಾಶಿ ದೊಡ್ಡನಗೌಡರು ಕನಕನಾಯಕ, ಕನಕದಾಸನಾದ ಬಗೆಯನ್ನು, ಪ್ರತಿಭೆಗೆ ಯಾವುದೇ ಜಾತಿಯ ಸಂಕೋಲೆ ಸಾಧ್ಯವಾದುದಲ್ಲ ಎಂಬುದನ್ನು ಬಹಳ ಸುಂದರವಾಗಿ ಅಭಿವ್ಯಕ್ತಿಸಿರುವುದನ್ನು ಈ ನಾಟಕದಲ್ಲಿ ಗುರುತಿಸಬಹುದಾಗಿದೆ.

ಅಧ್ಯಯನ ಕೇಂದ್ರದ ಯೋಜನೆಗಳನ್ನು ಅತ್ಯಂತ ಕ್ರಿಯಾಶೀಲವಾಗಿ ಅನುಷ್ಠಾನಗೊಳಿಸಲು ಕಾರಣಕರ್ತರಾದ ಸ್ವತಃ ಸಾಹಿತಿಗಳೂ ಆದ ಕೇಂದ್ರದ

ಸಮನ್ವಯಾಧಿಕಾರಿಗಳಾದ ಶ್ರೀ ಕಾ ತ ಚಿಕ್ಕಣ್ಣ ಅವರಿಗೆ, ಸದಸ್ಯ - ಕಾರ್ಯದರ್ಶಿಗಳಿಗೆ, ಅಧ್ಯಯನ ಕೇಂದ್ರದ ಕಾರ್ಯಾನುಷ್ಠಾನ ಮಂಡಳಿಯ ಸದಸ್ಯರಿಗೆ ಕೃತಜ್ಞತೆಗಳು. ಓದುಗರು ಈ ಕೃತಿಯ ಪ್ರಯೋಜನವನ್ನು ಪಡೆದುಕೊಳ್ಳುವರೆಂದು ಭಾವಿಸಿದ್ದೇನೆ.

ಕೆ. ಎ. ದಯಾನಂದ ಕ.ಆ.ಸೇ
ಅಧ್ಯಕ್ಷರು

## ಮುಂಮಾತು

ಡಾ. ಜೋಳದರಾಶಿ ದೊಡ್ಡನಗೌಡ ಅವರು ಕನ್ನಡ ಹಾಗೂ ತೆಲುಗು ಎರಡು ಭಾಷೆಗಳಲ್ಲಿ ಪ್ರಬುದ್ಧತೆ ಸಾಧಿಸಿದವರು. ರಂಗಭೂಮಿ, ಸಾಹಿತ್ಯ, ಗಮಕ ಕಲೆಗಳ ತ್ರಿವೇಣಿ ಸಂಗಮ ಅವರು. ಅವರು ಶ್ರೇಷ್ಠ ನಾಟಕಕಾರರಾಗಿ ಹೇಗೆ ಪ್ರಸಿದ್ಧರೊ ಹಾಗೇ ಗಮಕ ಕಲೆಯನ್ನು ಕರಗತ ಮಾಡಿಕೊಂಡು ಸಾಹಿತ್ಯಾಭಿಮಾನಿಗಳಲ್ಲಿ ರಸಬಿತ್ತಿಯನ್ನು ರೂಪಿಸಿದವರು. ಅವರು ರಚಿಸಿದ ಕ್ರಾಂತಿಪುರುಷ ಬಸವಣ್ಣ ಮತ್ತು ಕನಕದಾಸ ಎಂಬ ಎರಡು ನಾಟಕಗಳು ಹೆಚ್ಚು ಪ್ರಸಿದ್ಧಿ ಪಡೆದವು. ಡಾ. ಜೋಳದರಾಶಿ ದೊಡ್ಡನಗೌಡ ಅವರು ನಾಟಕ ಕರ್ತೃ ಹೇಗೋ ಹಾಗೇ ನಟರಾಗಿಯು ತಮ್ಮ ಕಲಾಪ್ರತಿಭೆಯನ್ನು ಪ್ರದರ್ಶಿಸಿದವರು. ಅವರ ಪ್ರತಿಭೆ ಕನಕದಾಸ ನಾಟಕದಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣಬಹುದು.

ಕನ್ನಡದ ಹಿರಿಯ ಸಂಸ್ಕೃತಿ ಚಿಂತಕರಾದ ಶ್ರೀ ಕೋ. ಚೆನ್ನಬಸಪ್ಪ ಅವರು, ಸುಮಾರು 5 ದಶಕಗಳ ಹಿಂದೆ ಹೊರಬಂದ ಕನಕದಾಸ ಪುಸ್ತಕವನ್ನು ನಮ್ಮ ಅಧ್ಯಯನ ಕೇಂದ್ರವು ಮರುಮುದ್ರಿಸುತ್ತಿದೆ ಎಂಬ ಸಂಗತಿಯನ್ನು ತಿಳಿಸಲು ಸಂತೋಷವಾಗುತ್ತದೆ. ಕನಕದಾಸರನ್ನು ವಿವಿಧ ಬಗೆಯ ಮರುಓದಿಗೆ, ಮರುನೋಟಕ್ಕೆ ಒಳಪಡಿಸುವ ಹಿನ್ನೆಲೆಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಅಧ್ಯಯನ ಕೇಂದ್ರವು 5 ದಶಕಗಳ ಹಿಂದೆ ಪ್ರಕಟವಾದ ಕನಕದಾಸ ನಾಟಕ ಕೃತಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ಆರ್ಥಿಕ ನೆರವು ನೀಡಿ ಮರುಮುದ್ರಿಸಿ ಕಲಾಭಿಮಾನಿಗಳಿಗೆ ತಲುಪಿಸಲು ಹೆಮ್ಮೆ ಪಡುತ್ತದೆ.

ಈ ಮರುಮುದ್ರಣಕ್ಕೆ ಸಲಹೆ ನೀಡಿದ ಶ್ರೀ ಕೋ. ಚೆನ್ನಬಸಪ್ಪ ಅವರಿಗೆ, ಮರುಮುದ್ರಣಕ್ಕೆ ಅನುಮೋದನೆ ನೀಡಿದ ಜೋಳದರಾಶಿ ರಾಮೇಶ ಪ್ರಕಟನ ಪ್ರಕಾಶನ ಸಂಸ್ಥೆಗೆ, ರಕ್ಷಾಪುಟದ ಮೂಲ ಕಲಾವಿದರಾದ ಶ್ರೀ ಕೊಂಡಾಚಾರಿ ಅವರಿಗೆ, ಮುಖಪುಟ ವಿನ್ಯಾಸ ಮಾಡಿಕೊಟ್ಟ ಶ್ರೀ ಮುರಳೀಧರ್ ವಿ ರಾಥೋಡ್ ಅವರಿಗೆ, ಪುಸ್ತಕವನ್ನು ಮುದ್ರಿಸಿದ ಸಿರಿವರ ಪ್ರಕಾಶನದ ಮುದ್ರಕರಿಗೆ, ಪುಸ್ತಕವನ್ನು ಮುದ್ರಿಸಿ ಮಾರುಕಟ್ಟೆಗೆ ನೀಡುತ್ತಿರುವ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಡಾ. ಬಂಜಗೆರೆ ಜಯಪ್ರಕಾಶ ಹಾಗೂ ಅಧಿಕಾರಿವರ್ಗಕ್ಕೆ, ಈ ಯೋಜನೆಯ

ಅನುಷ್ಠಾನಕ್ಕೆ ಅವಕಾಶ ಮಾಡಿಕೊಟ್ಟ ಕೇಂದ್ರದ ಅಧ್ಯಕ್ಷರು ಹಾಗೂ ಸದಸ್ಯ-ಕಾರ್ಯದರ್ಶಿ ಹಾಗೂ ಎಲ್ಲ ಸದಸ್ಯರಿಗೆ ಕಾರ್ಯಾಲಯದ ಸಿಬ್ಬಂದಿ ಮಿತ್ರರಿಗೆ ಆತ್ಮೀಯ ಕೃತಜ್ಞತೆಗಳು.

(ಕಾ ತ ಚಿಕ್ಕಣ್ಣ)
ಸಮನ್ವಯಾಧಿಕಾರಿ

## ಪ್ರಕಾಶಕರ ಮಾತು

ಕಾಲ ಸಂದ ಬಳಿಕ ಕಳೆದು ಹೋಗುವವರು ಕೆಲವರು. ಕ್ರಮೇಣ ಮಸುಕುಗೊಳ್ಳುವವರು ಕೆಲವರು. ಕೆಲವರು ಮಾತ್ರ ತಮ್ಮ ಕಾಲದ ಆಚೆಗೂ ಕಾಲದಿಂದ ಕಾಲಕ್ಕೆ ಬೆಳಗುತ್ತಲೇ ಹೋಗುವವರು. ಅಂತಹವರನ್ನು ವಾಡಿಕೆಯಲ್ಲಿ ನಂದದ ನಂದಾ ದೀಪಗಳೆಂದು ಕರೆಯುತ್ತಾರೆ. ನಮ್ಮ ಕಾಲಜ್ಞಾನಿ ಕನಕ ಅಂತಹವರಲ್ಲೊಬ್ಬರು. 'ದಾಸನೆಂದರೆ ದಾಸನಯ್ಯ ನಮ್ಮ ಕನಕದಾಸ' ಎಂದು ಸಮಕಾಲೀನ ದಾಸವರೇಣ್ಯರಿಂದ ಸ್ತುತಿಸಲ್ಪಟ್ಟ ಕನಕದಾಸರು ಕನ್ನಡ ನಾಡಿನ ಭಾಗ್ಯಗಳಲ್ಲೊಬ್ಬರು.

ಕಾಗಿನೆಲೆಯಾದಿಕೇಶವನ ಸ್ಮರಣೆಯಲ್ಲಿ, ಕೃಷ್ಣಲೀಲಾವಿನೋದದ ಆಟದಲ್ಲಿ ಮುಳುಗಿ, ಭಕ್ತಿರಸದಲ್ಲಿ ಮಿಂದೆದ್ದ ಕನಕದಾಸರು ಕೇವಲ ಭಕ್ತ ಮಾತ್ರವಲ್ಲದೆ ಸಂತ, ಕವಿ, ದಾರ್ಶನಿಕ ಹಾಗೂ ಸಾಮಾಜಿಕ ಹೋರಾಟಗಾರ. 'ಆತ್ಮ ಯಾವ ಕುಲ, ಜೀವ ಯಾವ ಕುಲ' ಎಂದು ಕೇಳುತ್ತಾ, ಜಾತಿ ಅವಹೇಳನದ ಪೊರೆಯನ್ನು ಕಳಚುತ್ತಾ, ಮನಸ್ಸಿನ ಮುಂದೆ ಆವರಿಸಿದ ಕುಲ, ಮತ ಮದಗಳ ಪೊರೆ ಹರಿದೆಸೆಯುತ್ತಾ, ಕರ್ನಾಟಕದ ಸಾಂಸ್ಕೃತಿಕ–ಸಾಹಿತ್ಯಿಕ ಲೋಕದ ಭಿತ್ತಿಯಲ್ಲಿ ಮಸಳಿಸದ ತಾರೆಯಾಗಿ ಬೆಳಗುತ್ತಿರುವವರು.

ಅಂತಹ ಸಂತ ಶ್ರೇಷ್ಠನ ಬದುಕು ಹಾಗೂ ಬರಹ ಕನ್ನಡದ ಜನಮಾನಸಕ್ಕೆ ಮಾತ್ರವಲ್ಲ ಭಾರತದ ಎಲ್ಲಾ ಭಾಷೆಗಳ ಜನರ ಅರಿವಿಗೂ, ಜ್ಞಾನೋತ್ಕರ್ಷಕ್ಕೂ ಹಾಗೂ ಸತ್ಯದ ಸಾಕ್ಷಾತ್ಕಾರಕ್ಕೂ ಕೈದೀವಿಗೆಯಂತಿದೆ. ಅವರ ಬರವಣಿಗೆಯ ಮುಖ್ಯ ರಚನೆಗಳನ್ನು ಬೇರೆ ಬೇರೆ ಭಾಷೆಗಳಿಗೆ ಅನುವಾದ ಮಾಡಿಸಿ ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿರುವ ರಾಷ್ಟ್ರೀಯ ಸಂತ ಕವಿ ಕನಕದಾಸ ಅಧ್ಯಯನ ಹಾಗೂ ಸಂಶೋಧನಾ ಕೇಂದ್ರದ ಕೆಲಸ ಶ್ಲಾಘನೀಯವಾದದ್ದು. ಭಾರತೀಯ ಭಾಷೆಗಳ ನಡುವೆ ಈ ಬಗೆಯ ಪರಸ್ಪರ ಕೊಳು–ಕೊಡೆಗಳ ಮುಖಾಂತರ ಏರ್ಪಡುವ ಸೌಹಾರ್ದತೆ ಹಾಗೂ ಭಾವ ಶ್ರೀಮಂತಿಕೆಯ ಮಹತ್ವ ಬಹು ಮುಖ್ಯವಾದದ್ದು. ಅನುವಾದ ಯೋಜನೆಯ ಕೃತಿಗಳನ್ನು ಕನಕ ಕೇಂದ್ರದ ಪರವಾಗಿ ಕನ್ನಡ ಪುಸ್ತಕ ಪ್ರಾಧಿಕಾರವು ಕಾರ್ಯನಿರ್ವಾಹಕ ಪ್ರಕಾಶಕ ಹಾಗೂ ಪ್ರಸಾರಕನಾಗಿ ಪ್ರಕಟಿಸುತ್ತಿದೆ.

ಇದೇ ರೀತಿಯಲ್ಲಿ ಕನಕದಾಸರ ಕುರಿತು ಕನ್ನಡದಲ್ಲಿ ಬಂದಿರುವ ಮೌಲಿಕ ಕೃತಿಗಳನ್ನು ಪ್ರಕಟಿಸುವ ಕಾರ್ಯವನ್ನೂ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಕೈಗೆತ್ತಿಕೊಂಡಿದೆ. ಇದರ ಅಂಗವಾಗಿ ಹಿರಿಯ ಜಾನಪದ ವಿದ್ವಾಂಸರಾದ ಶ್ರೀ ಜೋಳವರಾಸಿ ದೊಡ್ಡನಗೌಡರು 1965ರಲ್ಲಿ ಪ್ರಥಮವಾಗಿ ಪ್ರಕಟಿಸಿದ 'ಕನಕದಾಸ' ನಾಟಕ ಕೃತಿಯನ್ನು ಪ್ರಕಟಿಸಲಾಗುತ್ತಿದೆ. ಅಷ್ಟು ಕಾಲದ ಹಿಂದೆಯೇ ಕನಕದಾಸರ ಜೀವನ ದರ್ಶನ, ಸಂತ ಸಂದೇಶ ಹಾಗೂ ದಾಸಪಂಥದ ಭಕ್ತಿಯ ಪರಿಗಳನ್ನು ಈ ನಾಟಕ ಪರಿಣಾಮಕಾರಿಯಾಗಿ ಜನತೆಗೆ ತಲುಪಿಸುತ್ತದೆ. ಈ ಮೌಲ್ಯಯುತ ಕೃತಿಯನ್ನು ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ ಪರವಾಗಿ ಪ್ರಕಟಿಸಲು ಕನ್ನಡ ಪುಸ್ತಕ ಪ್ರಾಧಿಕಾರ ಸಂತೋಷಿಸುತ್ತದೆ.

– ಡಾ. ಬಂಜಗೆರೆ ಜಯಪ್ರಕಾಶ<br>
ಅಧ್ಯಕ್ಷರು<br>
ಕನ್ನಡ ಪುಸ್ತಕ ಪ್ರಾಧಿಕಾರ

## ಪಾತ್ರಗಳು

| ಪುರುಷರು | ಸ್ತ್ರೀಯರು |
|---|---|
| ಕನಕದಾಸ | ಬಚ್ಚಮ್ಮ |
| ಬೀರಣ್ಣ | ರೂಪಸುಂದರಿ–ರೋಹಿಣಿ |
| ಬರ್ಮಣ್ಣ | |
| ವ್ಯಾಸರಾಯ | |
| ಭೀಮಾಚಾರ್ಯ | |
| ಗೋವಿಂದಾಚಾರ್ಯ | |
| ಪುರಂದರದಾಸ | |
| ಮೋಹನ | |
| ವಾಸುದೇವಾಚಾರ್ಯ | |
| ಶಾಮಾಚಾರ್ಯ | |
| ಗುಂಡಾಚಾರ್ಯ | |
| ರಾಮಾಚಾರ್ಯ | |

ಶಿದ್ದಣ್ಣ – ಜಂಗಮ – ಸೇವಕ, ಭಿಕ್ಷುಕ, ಮುಕುಂದ, ಮೊದಲಾದವರು.

**ಸೂಚನೆ:–** ಈ ನಾಟಕದಲ್ಲಿಯ ಹಾಡು–ಪದ್ಯಗಳು ಅನುಬಂಧದಲ್ಲಿ ಕೊಟ್ಟಿದೆ. ಅಲ್ಲಲ್ಲಿ ಗುರ್ತಿಸಿದ ಸಂಖ್ಯೆಯಿಂದ ಆಯಾಪಾತ್ರಗಳು ಅವುಗಳನ್ನು ಉಪಯೋಗಿಸಿಕೊಳ್ಳಬಹುದು.

## ಕನಕದಾಸ

ನಾಟಕದಲ್ಲಿಯ ನೋಟಗಳಿಗೆ ಬೇಕಾಗುವ ಪರಿಕರಗಳು, ಪಾತ್ರಗಳು

### ಅಂಕ ೧. ನೋಟ ೧.

**ಬೀರಪ್ಪದೇವರಗುಡಿ.**

ಬೀರಪ್ಪದೇವರು. 2 ದೀಪಸ್ತಂಭಗಳು. ಪೂಜಾಸಾಮಗ್ರಿ ತಟ್ಟೆ, ಗಂಟೆ. ಹೂವಿನಹಾರ, ಮಾವಿನತೋರಣ. ಬಾಳೆ–ತೆಂಗಿನಗರಿಗಳು.

4 ಡೊಳ್ಳು, 2 ಜತೆದೊಡ್ಡತಾಳ. 4 ತಾಯಿತಸರಗಳು. 4 ರುಮ್ಮಾಲ, 4 ಚಲ್ಲಣ. 4 ಕಸೆಅಂಗಿಗಳು. 4 ಕಂಬಳಿಗಳು 2 ಕೋಲುಗಳು. 2 ಕೊಡ್ಲಿಗಳು. 2 ಕತ್ತಿಗಳು. 1 ಕುರಿ [ಕೊರಳಲ್ಲಿ ಬೇವಿನರಸ–ಮುಖಕ್ಕೆಬಂಡಾರ ಹಚ್ಚಿರಬೇಕು] ಕಾಳಿ.

ಮುಖ್ಯಪಾತ್ರಗಳು: ಬೀರಣ್ಣ, ಬರ್ಮಣ್ಣ, ತಿಮ್ಮಪ್ಪನಾಯಕ, ಬಚ್ಚಮ್ಮ.

ಸಹಾಯ ಪಾತ್ರಗಳು: 8 ಜನ ಕುರುಬರು. ಸೇವಕ, ಬೆತ್ತದವನು.

**ನೋಟ ೨: ಶಿವಪ್ಪನಾಯಕನ ಪಾಳ್ಯರಾಮಪುರಕ್ಕೆ ಹೋಗುವ ರಸ್ತೆ.**

ಬೀರಣ್ಣ, ಬರ್ಮಣ್ಣ. [ಮೊದಲ ನೋಟದಲ್ಲಿದ್ದಂತೆ ವೇಷ. ಬೀರಣ್ಣ ಮಾತ್ರ ಬೆನ್ನಿಗೆ ದೊಡ್ಡಗಂಟು ಕಟ್ಟಿಕೊಂಡಿರುತ್ತಾನೆ. ಬರ್ಮಣ್ಣನು ರುಮ್ಮಾಲದಲ್ಲಿ ಸಂಚಿ ಸಿಕ್ಕಿಸಿಕೊಂಡಿರುತ್ತಾನೆ. ಇಬ್ಬರು ಕೈಯಲ್ಲಿ ದೊಡ್ಡ ಕೋಲುಗಳನ್ನು ಹಿಡಿದಿರುತ್ತಾರೆ.] [ಈ ನೋಟಕ್ಕೆ ಉಪಕರಣಗಳು ಬೇಕಿಲ್ಲ]

**ನೋಟ ೩ : ಕನಕನಾಯಕನ ಮನೆ.**

ಮಂಚ. ಹಾಸಿಗೆ. ದಿಂಬು. ಹೊದಿಕೆ. 2 ಕುರ್ಚಿಗಳು. 1 ಚಿಕ್ಕಪೀಠ, ಸೀಸೆಗಳು. ತಂಬಿಗೆ, 2 ಲೋಟಗಳು. ಬೀಸಣಿಗೆ.

ಮುಖ್ಯಪಾತ್ರಗಳು: ಕನಕನಾಯಕ, ಬಚ್ಚಮ್ಮ, ಬೀರಣ್ಣ, ಬರ್ಮಣ್ಣ.

**ನೋಟ ೪ ಶಿವಪ್ಪನಾಯಕನ ಪಾಳ್ಯದಲ್ಲಿ ಯುದ್ಧದ ಕೋಲಾಹಲ**

[ಎಲ್ಲ ಪರದೆಯೊಳಗೆ] ತಮ್ಮಟೆಗಳು 2 ಕಾಳಿ. 2 ಕತ್ತಿಗಳು.

ಮುಖ್ಯಪಾತ್ರಗಳು: ಬೀರಣ್ಣ, ಬರ್ಮಣ್ಣ, ಕನಕನಾಯಕ, ರೋಹಿಣಿ [ಕನಕನಾಯಕನ ಮಗಳು].

## ಅಂಕ ೨. ನೋಟ ೧

**ತುಂಗಭದ್ರಾ ತೀರ.**

ಕಾಷಾಯ ವಸ್ತ್ರಗಳು. ರುದ್ರಾಕ್ಷಿಗಳು. ಜೋಳಿಗೆ. ಏಕತಾರ. ಮಧ್ವ ಬ್ರಾಹ್ಮಣರ ಉಡುಪುಗಳು. 2 ತಂಬಿಗೆಗಳು.

ಮುಖ್ಯಪಾತ್ರಗಳು: ಕನಕನಾಯಕ, ವ್ಯಾಸರಾಯರು, ಭೀಮಾಚಾರ್ಯ, ಗೋವಿಂದಾಚಾರ್ಯ, ಶಾಮಾಚಾರ್ಯ, ರಾಮಾಚಾರ್ಯ, ಗುಂಡಾಚಾರ್ಯ. ಜಂಗಮ.

**ನೋಟ 2: ವಿಜಯನಗರ ವ್ಯಾಸರಾಯರ ಮಠದ ಹಿಂಭಾಗ.**

ಮುಖ್ಯಪಾತ್ರಗಳು: ಭೀಮಾಚಾರ್ಯ, ಗೋವಿಂದಾಚಾರ್ಯ, ಡಂಗುರದ ಬ್ರಾಹ್ಮಣ. (ಜಾಗಟೆ ಬಾರಿಸುತ್ತ ಬರುವನು.)

**ನೋಟ ೩ : ವ್ಯಾಸರಾಯರ ಮಠ:**

1 ದೊಡ್ಡ ಪೀಠ. 3 ಚಿಕ್ಕಪೀಠಗಳು. ಹುಲಿಯಚರ್ಮ. ಜಿಂಕೆಚರ್ಮ.

2 ಬೆಳ್ಳಿಯ ಬೆತ್ತಗಳು. 2 ದೊಡ್ಡ ಬೀಸಣಿಗೆಗಳು.

ಮುಖ್ಯಪಾತ್ರಗಳು: ವ್ಯಾಸರಾಯರು, ಭೀಮಾಚಾರ್ಯ, ಗೋವಿಂದಾಚಾರ್ಯ, ಶಾಮಾಚಾರ್ಯ, ರಾಮಾಚಾರ್ಯ, ಗುಂಡಾಚಾರ್ಯ, ಕನಕದಾಸ, ಪುರಂದರದಾಸ.

ಸಹಾಯ ಪಾತ್ರಗಳು: 8 ಜನ ಬ್ರಾಹ್ಮಣರು ಸಭೆಯಲ್ಲಿರುವರು [ಇದರಲ್ಲಿಬ್ಬರು ಬೆಳ್ಳಿಯ ಬೆತ್ತಗಳ ಹಿಡಿದಿರುವರು. ಇನ್ನಿಬ್ಬರು ಬೀಸಣಿಗೆ ಹಿಡಿದಿರುವರು]

**ನೋಟ ೪: ವಿಜಯನಗರ, ಬೀದಿ.**

ಮುಖ್ಯಪಾತ್ರಗಳು: ಭೀಮಾಚಾರ್ಯ, ಗೋವಿಂದಾಚಾರ್ಯ. [ಭೀಮಾಚಾರ್ಯರ ಕೈಯಲ್ಲಿ ಬೀಸಣಿಗೆ ಇರುತ್ತೆ] ಯಾವ ಉಪಕರಣ ಬೇಕಿಲ್ಲ.

**ನೋಟ ೫: ಸೂಳೆಗೇರಿ, ರತ್ನಮಂಜರಿಯ ಮನೆ.**

ಮಂಚ. ಚಿಕ್ಕವೇದಿಕೆ. ಹೂವಿನಕೂಜ. ಪನ್ನೀರುಗಿಂಡಿ. ಗಂಧದ ಬಟ್ಟಲು. ಹೂವಿನಹಾರ. ಊದುಬತ್ತಿ. 2 ಕುರ್ಚಿಗಳು. ತಂಬೂರಿ. ಮೃದಂಗ. ಪಿಟೀಲು. ತಾಳ, ಗೆಜ್ಜೆ.

ಮುಖ್ಯಪಾತ್ರಗಳು: ರೂಪಸುಂದರಿ, ಭೀಮಾಚಾರ್ಯ, ಗೋವಿಂದಾಚಾರ್ಯ.

ಸಹಾಯಪಾತ್ರಗಳು: ರತ್ನಮಂಜರಿ, ಪರಿಚಾರಕ.

**ನೋಟ ೬ : ರತ್ನಮಂಜರಿಯ ಮನೆಯ ಹಿಂಭಾಗದ ರಸ್ತೆ.**

ಮುಖ್ಯಪಾತ್ರಗಳು: ಭೀಮಾಚಾರ್ಯ, ಗೋವಿಂದಾಚಾರ್ಯ. ಪರಿಕರಗಳು ಬೇಕಿಲ್ಲ.

**ನೋಟ ೭**

ಪುರಂದರದಾಸರ ಮಂಟಪ: ಮಂದಾಸನ. ವಿಠಲನ ಪ್ರತಿಮೆ. 2 ದೀಪ ಸ್ತಂಭಗಳು. ಪೂಜಾಸಾಮಗ್ರಿ ಪೊರಕೆ.

ಮುಖ್ಯಪಾತ್ರಗಳು: ಕನಕದಾಸ. ರೂಪಸುಂದರಿ. ಸೇವಕ.

**ನೋಟ ೮ : ರತ್ನ ಮಂಜರಿಯ ಮನೆಗೆ ಹೋಗುವ ರಸ್ತೆ.**

ಮುಖ್ಯಪಾತ್ರಗಳು: ಕನಕದಾಸ, ರೂಪಸುಂದರಿ, ಪರಿಕರಗಳು ಬೇಕಿಲ್ಲ.

**ನೋಟ ೯ – ರತ್ನಮಂಜರಿಯ ಮನೆ:**

[5ನೇ ನೋಟದಲ್ಲಿದ್ದಂತೆ ಎಲ್ಲಾ ಇರುತ್ತವೆ]

ಮುಖ್ಯಪಾತ್ರಗಳು: ರೂಪಸುಂದರಿ, ಕನಕದಾಸ, ಪುರಂದರದಾಸ.

### ಅಂಕ ೩. ನೋಟ ೧

### ಬೀದಿ

ಮುಖ್ಯಪಾತ್ರಗಳು: ಭೀಮಾಚಾರ್ಯ, ಗೋವಿಂದಾಚಾರ್ಯ, ಪರಿಕರಗಳು ಬೇಕಿಲ್ಲ.

**ನೋಟ ೨ : ಕನಕದಾಸರ ಮಂಟಪ.**

ಮಂದಾಸನ. ಕೃಷ್ಣವಿಗ್ರಹ. ಪೂಜಾಸಾಮಗ್ರಿ, 2 ದೀಪಸ್ತಂಭಗಳು. ಹೂವು. ಚಿಕ್ಕವೇದಿಕೆ. ಮೇಜು. ಪುಸ್ತಕ. ಲೆಕ್ಕಣಿಕೆ–ಮಸಿ. 4 ಜತೆ ತಾಳ. ಡಕ್ಕಿ.

ಮುಖ್ಯಪಾತ್ರಗಳು: ಕನಕದಾಸ, ರೂಪಸುಂದರಿ, ಮೋಹನ.

ಸಹಾಯಪಾತ್ರಗಳು: 6 ಜನ ಶಿಷ್ಯರು.

**ನೋಟ ೩: ಉಡುಪಿಗೆ ಹೋಗುವ ರಸ್ತೆ.**

ಮುಖ್ಯಪಾತ್ರಗಳು: ಶಾಮಾಚಾರ್ಯ, ರಾಮಾಚಾರ್ಯ, ಗುಂಡಾಚಾರ್ಯ.

ಸಹಾಯಪಾತ್ರಗಳು: 6 ಜನ ಯಾತ್ರಿಕರು (4 ಜತೆ ತಾಳಗಳು).

**ನೋಟ ೪: ಉಡುಪಿ ಕೃಷ್ಣನ ಮಂದಿರದ ಮುಂಭಾಗ:**

ಬೆಳ್ಳಿಹಿಡಿಯ ಕೋಲು. 4 ಜತೆತಾಳ. ಡಕ್ಕಿ. ಏಕತಾರ.

ಮುಖ್ಯಪಾತ್ರಗಳು : ಧರ್ಮಕರ್ತ ವಾಸುದೇವಾಚಾರ್ಯ, ಭೀಮಾಚಾರ್ಯ, ಗೋವಿಂದಾಚಾರ್ಯ, ಶಾಮಾಚಾರ್ಯ, ರಾಮಾಚಾರ್ಯ, ಗುಂಡಾಚಾರ್ಯ, ಕನಕದಾಸ, ರೂಪಸುಂದರಿ, ಮೋಹನ.

ಸಹಾಯ ಪಾತ್ರಗಳು : 6 ಜನಯಾತ್ರಿಕರು. 6 ಜನಶಿಷ್ಯರು.

**ನೋಟ ೫: ಕೃಷ್ಣಮಂದಿರದ ಬೀದಿ.**

ಕೋಲು. ಭಿಕ್ಷಾಪಾತ್ರೆ. ತಾಳ. ಏಕತಾರೆ.

ಮುಖ್ಯಪಾತ್ರಗಳು: ಕನಕದಾಸ, ರೂಪಸುಂದರಿ, ಮೋಹನ, ಕುಂಟ.

ಸಹಾಯಪಾತ್ರಗಳು: 6 ಜನ ಶಿಷ್ಯರು.

**ನೋಟ ೬: ಕೃಷ್ಣನ ಮಂದಿರದ ಹಿಂಭಾಗ:**

ಗುಡಿಗಂಡಿ. ಕೃಷ್ಣವಿಗ್ರಹ. ಹೂವಿನಹಾರ. ಪೂಜಾಸಾಮಗ್ರಿ. ಕರ್ಪೂರ. ತಟ್ಟೆ ಗಂಟೆ. ಪಟಾಕಿ.

ಮುಖ್ಯಪಾತ್ರಗಳು: ಧರ್ಮಕರ್ತ ವಾಸುದೇವಾಚಾರ್ಯ, ಭೀಮಾಚಾರ್ಯ, ಗೋವಿಂದಾಚಾರ್ಯ, ರಾಮಾಚಾರ್ಯ, ಶಾಮಾಚಾರ್ಯ, ಗುಂಡಾಚಾರ್ಯ, ರೂಪಸುಂದರಿ, ಮೋಹನ, ಕುಂಟ.

ಸಹಾಯ ಪಾತ್ರಗಳು: ಶಿಷ್ಯರು, ಯಾತ್ರಿಕರು.

ಮಂಗಳ

ಒಂದನೇ ಅಂಕ ಒಂದನೇ ನೋಟ

## ಕನಕಗ್ರಾಮ–ಬಾಡ

### -- ಬೀರಪ್ಪನ ಗುಡಿ--

(ತಿಮ್ಮಪ್ಪ ನಾಯಕನಿಗೆ–ಹಣಸಿಕ್ಕ ಸಂತೋಷಕ್ಕಾಗಿ ಕುರುಬರು–ಬೀರಪ್ಪ–ಬರ್ಮಪ್ಪ ದೇವರಿಗೆ ಕೈ ಮುಗಿದು.)

*(ಅನುಬಂಧ ೧)

ಬರ್ಮ : ಸ್ವಾಮೀ ಬೀರಪ್ಪ ದೇವರೇ! ನಿನ್ನ ಮಕ್ಕಳಾದ ನಮ್ಮನ್ನು ಮರೆಯಬೇಡಪ್ಪಾ! ಕಾಲಕಾಲಕ್ಕೆ ಮಳೆ ಬೆಳೆ ಕೊಟ್ಟು ನಮ್ಮನ್ನು ಕಾಪಾಡು. ನಿಂಗೆ ಬಲ್ತ ಕುರಿಗಳ್ನ ಬಲಿಕೊಡ್ತೇವೆ. ನಿನ್ನ ಕರುಣದಿಂದ್ಲೆ ನಮ್ಮೊಡೆಯ ತಿಮ್ಮಪ್ಪನಾಯಕರಿಗೆ ದೊಡ್ಡ ಕೊಪ್ಪರಿಗೆ ಧನ ಸಿಕ್ಕಿದ್ದು. ಯಪ್ಪಾ! ಎಲ್ಲಾ ನಿನ್ಮೈಮೆ.

ಬೀರ : ಏನು ಬರ್ಮಪ್ಪ! ನಮ್ಮ ನಾಯಕ್ರಿಗೆ ದನಸಿಕ್ಕೈತೇನು?

ಬರ್ಮ : ಔದು.

ಬೀರ : ಎಲ್ಲಿ?

ಬರ್ಮ : ನಿನಗೆ ಈ ಇಸಯ ಗೊತ್ತೇ ಇಲ್ಲೇನು?

ಬೀರ : ಇಲ್ಲಪ್ಪ! ಈಗ ನಿನ್ನಿಂದೇ ಕೇಳಿದ್ದು. ದೊಡ್ಡ ಕೊಪ್ಪರಿಕೇ ಸಿಕ್ಕೈತೇನು?

ಬರ್ಮ : ಬರೇ ದೊಡ್ಡ ಕೊಪ್ಪರಿಕೆಯಲ್ಲೋ ಅದರತುಂಬ ಬಂಗಾರ–ಬಂಗಾರ ಸಿಕ್ಕೈತೆ.

ಬೀರ : ಏನು ಬಂಗಾರವೇ?

ಬರ್ಮ : ಔದೊ.

ಬೀರ : ದೊಡ್ಡ ಕೊಪ್ಪರಿಗೆ ತುಂಬ ಬಂಗಾರೇನು?

ಬರ್ಮ : ಔದೋ ಎಲ್ಲಾ ಬಂಗಾರೆ.

ಬೀರ : ಅದು ನಿಂಗೆಂಗೊತ್ತಾಯ್ತಪ್ಪ?

ಬರ್ಮ : ನನ್ನ ಅಳಿಯ ಸ್ವಾಮಿ ಯೇಳ್ದ.

ಬೀರ : ಸರಿ. ಆ ಕೊಪ್ಪರಿಗೆ ಎಲ್ಲಿಸಿಕ್ತು?

ಬರ್ಮ : ಇಲ್ಕೇಳು. ದಿನಾಲು ಕುರಿಹಿಂಡಿನಾಗೆ ಒಕ್ಕೊಂಡು ಪೀಡಿಸುತ್ತಿತ್ತಲ್ಲಾ ಆ ಸಿರ್ತೆ....

ಬೀರ : ಅದೇ ಸರ್ತೆಯೇನು ಅಣ ತೋರಿಸಿದ್ದು.

ಬರ್ಮ : ಅಲ್ಲೋ ಮಾರಾಯ? ಸಿರ್ತೆ ಯಂಗ್ತೋರುಸ್ತೋ ಯಣಾ ಕೂಡ ತೋರಿಸೋದಿಲ್ಲ.

ಬೀರ : ಅಂಗಾದ್ರೆ ಯಂಗ್ಸಿಕ್ತ್ಯಾ?

ಬರ್ಮ : ತುಟುಕು ನಿದಾನಿಸೋ ಆ ಪೀಡೆಮಾಡ್ತಿದ್ದ.... ಸಿರ್ತೆ....

ಬೀರ : ಮತ್ತೆ ಸಿರ್ತೆ ಯೇನ್ಸಂತೊ ಯಣಕೂಡ ತೋರಿಸಾದಿಲ್ಲಾಂಬ್ತಿ.

ಬರ್ಮ : ಸರೋಯ್ತು. ಮುಂದೆ ಯೇಳೋದೆಂಗೆ? ಸಿರ್ತೆಗೇ ನನ್ನನ್ನು ನಿಲ್ಸಿಬಿಟ್ಟು ಏನೇನೋ ಮಾತಾಡಿಸ್ತೀಯಲ್ಲ ಮುಂದೆಂಗೇಳೋದು?

ಬೀರ : ಸರೆ ಮುಂದೇಳು.

ಬರ್ಮ : ಆಗ ಆ ಸಿರ್ತೆ.... ....

ಬೀರ : ಆಳಾಗಲಿ ನಿನನಿನ ಆ ಸಿರ್ತೆ ಆ ಸಿರ್ತೆಬಿಟ್ಟು ಮುಂದ್ಕೇಳಪ್ಪಾ!

ಬರ್ಮ : ಅದೇನೋ ನಾನು ಯೇಳ್ತಿದ್ದುದ್ದು. ಬೇಟೆಗೆ ವೋಗಿದ್ದರು.

ಬೀರ : ಯಾರು?

ಬರ್ಮ : ಮತ್ತೇ ಯಾರಂತ ಕೇಳ್ತಿಯಲ್ಲ ಇನ್ನಾರು ನಮ್ಮ ತಿಮ್ಮಪ್ಪ ನಾಯಕ್ರು.

ಬೀರ : ಸರಿ ಸರಿ ಆಮೇಲೆ

ಬರ್ಮ : ಬೇಟೆ ಮುಗ್ಸಿಕೊಂಡು ಬರುವಾಗ ನಮ್ಮ ನಾಯಕರ ಕುರಿ ಅಟ್ಟಿ ಆಯಿತಲ್ಲಾ....

ಬೀರ : ಔದು ಔದು ಅಲ್ಲಿ ಒಂದು ದೊಡ್ಡ ಆಲ್ದ ಮರಾನು ಐತೆ.

ಬರ್ಮ : ಆ ಆ ಆಲ್ಲೇ ನೋಡು.

ಬೀರ : ಆ ಆಲ್ದ ಗಿಡ್ಡ ಬುಡದಲ್ಲೇನು?

ಬರ್ಮ : ಔದು ನಾಯಕ್ರಿಗೆ ಅಲ್ಲೇನೋ ಥಳಕ್ ಫಳಕ್‌ಯೆಂದು ಮಿಂಚಿದಂಗಾತಂತೆ ಇದೇನಿರಬೋದೂಂತ ನೋಡ್ದ್ರೆ ಅಲ್ಲಿ ಏನೂ ಯಿದ್ದಿಲ್ಲಂತೆ.

ಬೀರ : ಯಲ ಯಲ ಅಂಗಾದ್ರೆ ಅಣ ಸಿಕ್ಕದ್ದು ಯಂಗಾ?

ಬರ್ಮ : ತಟೂಕ ನಿದಾನ ಮಾಡೋ ನೀನು ಬಲೆ ತುರ್ತಿನವನಪ್ಪ ಆಗ ನಾಂಯಕರು ಯಿಲ್ಲೇನಾದರೂ ದನ ಯಿರಬಹುದೂಂತ ಆ ಜಾಗನೆಲ್ಲ ತೋಡಿಸ್ದ್ರೆ ದೊಡ್ಡ ಕೊಪ್ರಿಕೆಯೇ ಕಂಡ್ತಂತೆ

ಬೀರ : ಆ ಆ ಬಾಗ್ಯದೇವ್ತೆ ಒಲಿದರೆ ಕೇಳೋದೇನು ಯಿಲ್ಲಿ ಕೇಳ ಬರ್ಮಪ್ಪಾ! ನಾನು ದಿನಾಲು ಆ ಆಲದ ಮರದ ಕೆಳಗೆ ಬುತ್ತಿ ತಿಂಬ್ತಿದ್ದೆ ಬತ್ತೀ ಸೇದ್ತಿದ್ದೆ. ಅಲ್ಲಾ ಒಂದಿನಾದರೂ ಈ ಪಾಪಿ ಕಣ್ಗೆ ಬೀಳಬಾರ್ದ!

ಬರ್ಮ : ಅದ್ಕೆಲ್ಲಾ ಪಡ್ದುಟ್ಟೀರ್ಬೇಕೋ ಬೀರಪ್ಪ!

ಬೀರ : ಔದು ಔದು ಅದೃಷ್ಟ ಬೇಕು ಆದ್ರೆ ಸಿದ್ದಣ್ಣ ಯಾಕೋ ಬರ್ಲಿಲ್ಲ

ಬರ್ಮ : ದೇವ್ರಗೆ ಬಲಿಕೊಡ್ಬೇಕೂಂತ ಹೇಳಿದ್ವೆ. ಅದ್ಕಾಗಿ ಕುರಿ ತರ್ಲಿಕ್ಕೆ ತಡ ಆಗಿರಬಹುದು.

ಬೀರ : ಒಳ್ಳೇ ಕೆಲ್ಸ ನಮ್ಮ ನಾಯಕರಿಗೆ ಅಣ ಸಿಕ್ಕ ಸಂತೋಸಕ್ಕಾಗಿ ಬಲಿ ಕೊಡ್ಬೇಕು. (ದೇವರಿಗೆ ಕೈ ಮುಗಿದು) ನಮ್ಮಪ್ಪಾ! ಬೀರಪ್ಪ ದೇವ್ರೆ ನಮ್ಮ ನಾಯಕರಿಗೆ ಒಳ್ಳೇ ಯೆಂಡ್ತೀನ ಕೊಡು ನಿನ್ಗೆ ಅತ್ತು ಕುರಿಗಳ್ನ ಬಲಿ ಕೊಡ್ತೇವೆ.

[ತಿಮ್ಮಪ್ಪ ನಾಯಕರು ಬರುವರು–ದೇವರನ್ನು ಪ್ರಾರ್ಥಿಸುವರು ಅಷ್ಟರಲ್ಲಿ ಸಿದ್ದಣ್ಣನು ಕುರಿಯನ್ನು ಹಿಡಿದು ತರುವನು]

* [ಅನುಬಂಧ ೨ ಮತ್ತು ೩]

ನಾಯಕ : ಇದೇನು ಆ ಕುರಿಯನ್ನು ಇಲ್ಲಿಗೆ ತಂದವರಾರು?

ಬರ್ಮ : ಒಡೆಯಾ ನಾನೇ ಸಿದ್ದಣ್ಣನಿಂದ ತರ್ಸ್ದೆ.

ನಾಯಕ : ಏತಕ್ಕಾಗಿ?

ಬರ್ಮ : ದೇವ್ರಿಗೆ ಬಲೀ ಕೊಡೋದಕ್ಕಾಗಿ.

ನಾಯಕ : ಬಲಿ.... ಈಗೇತಕ್ಕೆ ಈ ಬಲಿ?

ಬರ್ಮ : ಸ್ವಾಮಿಯು ದಣೇರಿಗೆ ಕನಕವನ್ನು ತೋರಿಸಿದ ಆನಂದಕ್ಕಾಗಿ

ನಾಯಕ : ಏನು ನಿಮ್ಮ ಆನಂದಕ್ಕಾಗಿ ಸಾಧುಜೀವಿಯು ಬಲಿಯಾಗಬೇಕೆ?

ಬರ್ಮ : ಅಂಗಲ್ಲಾ ದೊರೆಗಳೇ! ಇದು ದೇವ್ರು ಪಿರೀತಿಯಿಂದ ತೆಗೆದುಕೊಂಬೋ ಕಾಣ್ಕೆ.

ನಾಯಕ : ಎಂತಹ ತಿಳುವಳಿಕೆ ನಿಮ್ಮದು ಕಾಣಿಕೆ ಬೇಡುವುದು ಮಾನವ ಸ್ವಭಾವ. ಇದನ್ನು ತಿಳಿಯದೆ ದೇವರ ಹೆಸರಿನಿಂದ ಪ್ರಾಣಿ ಬಲಿಯನ್ನು ಕೊಡುವುದು ಯಾವ ನ್ಯಾಯ.

ಬರ್ಮ : ಪ್ರಬು! ತಮಗೆ ಯೇಳಲು ನಾನೆಷ್ಟರವನು. ಆದರೆ ಬಲಿಯಿಂದ್ಲೇ ದೇವ್ರು ಪಿರೀತನಾಗ್ತಾನಂತೆ ಇಲ್ಲಿದ್ರೆ ನಮ್ಗಳ್ನೆಲ್ಲಾ ಯಂಗಂದ್ರಂಗೆ ಪೀಡಿಸ್ತಾನೇಂತ ನಮ್ಮ ದೊಡ್ಡೋರು ಯೇಳೋಮಾತು. ಬುದ್ಧಿ ನಾವು ಅದನ್ನೇ ಆಚರಿಸ್ತೇವೆ.

ನಾಯಕ : ಅಯ್ಯೋ ಎಂತಹ ಹುಚ್ಚು ತಿಳುವಳಿಕೆ ನಿಮ್ಮದು. ಮನುಷ್ಯನು ತಾನು ನೀರೆರೆದು ಬೆಳೆಸಿ ಸುಗಂಧ ಪುಷ್ಪಗಳಿಂದ ಅಲಂಕೃತವಾದ ಗಿಡವನ್ನು ಕೀಳಲು ಅವನ ಕರುಳೇ ಮರುಗುವಾಗ ಇನ್ನು ಅನಂತ ಕರುಣಾಮೂರ್ತಿಯಾದ ದೇವನು ತಾನು ಹುಟ್ಟಿಸಿ ಬೆಳೆಸಿದ ತನ್ನ ಮಕ್ಕಳ ಎಳೆಯ ರಕ್ತವನ್ನೇ ರುಚಿ ನೋಡಲು ಬಯಸುವನೇ ಇಂತಹ ಬಲಿ ಬೇಡುವುದಾದರೆ ಆ ದೇವರೆ ನಮಗೆ ಬೇಡ.

ಬರ್ಮ : ಅಂಗದ್ರೆ ಯೆಂಗಾದೀತು ಬುದ್ಧಿ! ಈ ನಮ್ಮ ಬೀರಪ್ಪ ದೇವ್ರಿಗೆ ನಮ್ಮ ಯಿರಿಯೋರೆಲ್ಲ ಬಕ್ತಿಯಿಂದ ಬಲಿಗಳ ಕೊಟ್ಟು ಸುಕದಿಂದ ಬಾಳಿಕೊಂಡು ಬಂದಿದ್ದಾರೆ. ಈ

ಕಾಲಕ್ಕೆ ಯಿಂಗೇನಾದ್ರು ಬಲಿಕೊಡೋದನ್ನ ನಿಲ್ಲಿಸ್ದ್ರೆ ದೇವ್ರು ನಮ್ಮೇಲೆ ಸಿಟ್ಟಾಗಬೋದೂಂತ ಬಯವಾಗ್ತೈತೆ.

ನಾಯಕ : ಅಹುದು ಆ ನಿಮ್ಮ ಭಯವೇ ನಿರಪರಾಧಿಯಾದ ಮೂಕ ಪ್ರಾಣಿಗಳ ಜೀವಿತವನ್ನು ನಾಶಪಡಿಸುವ ಯಮ ಪಾಶವಾಗಿದೆ.

ಬರ್ಮ : ತಾವು ಬೇಸ್ರ ಪಡಬಾರದು ಇದು ಪೂರ್ವದಿಂದ ಬಂದ ಆಶಾರ.

ನಾಯಕ : ಆಚಾರ!.... ಪೂರ್ವದಿಂದ ಬಂದ ಆಚಾರ – ಪ್ರಾಣಘಾತಕ ಆಚಾರ.

ಬರ್ಮ : ಬಲಿಕೊಟ್ಟ ಪರಾಣಿಗಳಿಗೆ ಒಳ್ಳೇ ಪದವಿ ಸಿಕ್ಕೈತಂತಲ್ಲ ದೊರೆಗಳೇ!

ನಾಯಕ : (ನಕ್ಕು) ಹಾಗೇನು ಅವುಗಳಿಗೆ ಒಳ್ಳೇ ಪದವಿ ಸಿಕ್ಕುವದೆಂದು ನಿಮಗೆ ನಂಬಿಕೆಯಾದರೆ ಆ ಪದವಿಯನ್ನು ಪಡೆಯಲು ನೀವೇ ಯೇತಕ್ಕೆ ಬಲಿಯಾಗಬಾರದು. ನಿಮ್ಮ ಈ ಲೋಕದ ಸುಖಕ್ಕಾಗಿ, ಪ್ರಾಣಹಿಂಸೆ ಮಾಡುವ ಪಾತಕವಾದರೂ ದೂರಾಗುವುದಲ್ಲದೆ ಇದಕ್ಕಿಂತಲೂ ಹೆಚ್ಚಿನ ಆನಂದವು ಆ ಲೋಕದಲ್ಲಿ ನಿಮಗೆ ಸಿಗಬಹುದಲ್ಲ.

ಬರ್ಮ : ಯೆಚ್ಚಿಗೆ ಮಾತ್ನಾಡಿದ್ದಕ್ಕೆ ದೊರೆಗಳು ಚಮಿಸಬೇಕು. ಅಲ್ಲ ದೊಡ್ಡವರಾದ ಬಿರಾಮ್ರು ಯಗಣದಲ್ಲಿ ಬಲೀನ ಕೊಡ್ತಾರಲ್ಲ ಅದು ಪಾಪ ಅಲ್ಲೇನು ಬುದ್ಧಿ!

ನಾಯಕ : ಏತಕ್ಕಲ್ಲ. ಯಾರು ಮಾಡಿದರೂ ಅದು ಪಾಪವೇ. ಅದರ ಫಲ ಅನುಭವಿಸಿಯೇ ತೀರಬೇಕು.

ಬರ್ಮ : ಅಂಗಾದ್ರೆ ಈ ಆಶಾರ ಯಾತರಿಂದ ವುಟ್ಟಿತೂಂತ?

ನಾಯಕ : ಸ್ವಾರ್ಥದಿಂದ – ಕ್ಷಣಿಕ ಸುಖ ಬಯಸಿದ್ದರಿಂದ.

ಬರ್ಮ : ದೊರೆಗಳೇ! ಮನಿಶಾ ಸುಕಕ್ಕಾಗಿ ಆಸೆಪಡೋದು ತಪ್ಪೇ?

ನಾಯಕ : ಬರ್ಮಪ್ಪಾ! ಮನುಷ್ಯನೇ ಏಕೆ ಪಶುಗಳೂ ತಮ್ಮ ಸುಖಕ್ಕಾಗಿ ಪ್ರಯತ್ನ ಪಡುವವು. ಅವುಗಳು ತಮ್ಮ ಸುಖಕ್ಕಾಗಿ ಪ್ರಾಣಿಗಳನ್ನು ಹಿಂಸಿಸಿ ಹೊಟ್ಟೆ ತುಂಬಿಕೊಳ್ಳುವವು. ಮನುಷ್ಯನು ಅವುಗಳಂತೆ ಸ್ವಾರ್ಥಪರನಾದರೆ ಇನ್ನು

ಮಾನವರಾದ ನಾವು ಹೆಚ್ಚಿನವರೆಂದು ಹೇಳಿಕೊಳ್ಳುವುದೇಕೆ? ಇದರಿಂದ ಮನುಷ್ಯನಿಗೂ, ಪಶುವಿಗೂ ಭೇದವೇನು? ಸ್ವಸುಖಕ್ಕಾಗಿ ದೇವತಾಸ್ತ್ರೀಯರ ಆಲಿಂಗನಕ್ಕಾಗಿ ಪವಿತ್ರಂಯಜ್ಞವೆಂಬ ಹೆಸರಿಟ್ಟು ಜೀವವಧೆಯನ್ನು ಮಾಡುವುದು ಪವಿತ್ರವೆ? ಜೀವಿಗೆ ಬಂದ ದುಃಖವನ್ನು ದೂರಮಾಡುವುದರಲ್ಲಿ ಪವಿತ್ರತೆಯಿರುವುದಲ್ಲದೆ ಜೀವಹಿಂಸೆ ಮಾಡುವುದರಲ್ಲಿ ಪವಿತ್ರತೆಯಿಲ್ಲ. ಕಡೆಗೆ ಪರರಿಗಾಗಿ ಪ್ರಾಣವನ್ನು ಕೊಡುವ ಆ ಮೂಕ ಜೀವಿಗಳ ತ್ಯಾಗವಾದರೂ ಮಾನವರೆಂದು ಹೆಮ್ಮೆ ಪಡುವ ನಮ್ಮಲ್ಲಿಲ್ಲವಲ್ಲ ಹಿಂಸೆಯಿಂದ ಕಳೆದುಕೊಳ್ಳಬಹುದೆ?

ಬರ್ಮ : ಪ್ರಭುಗಳು ಯೇಳಿದ ಯಿಸಯಗಳು ನಿಜಯಿದ್ದರೂ ರುದ್ದಾಚಾರ (ವೃದ್ಧಾಚಾರ) ಬಿಡಾಕಾಗ್ತೈತಾ?

* [ಅನುಬಂಧ 4]

ನಾಯಕ : ಎಂತಹ ಅನ್ಯಾಯ ವೃದ್ಧಾಚಾರದಿಂದ ಎಂತೆಂತಹ ಅನಾಹುತ, ನೋಡಿರಿ ದೇವರಿಗೆ ಬಲಿಯನ್ನು ಕೊಡಲು ತಂದ ಕುರಿಯ ಮುಖವನ್ನು ನೋಡಿರಿ ನೀವೇ ಕಾಪಾಡುವವರೆಂದು ನಂಬಿದೆ. ಇನ್ನು ಮುಂದೆ ಯಾರೇ ಆಗಲಿ ನನ್ನ ನಾಡಿನಲ್ಲಿ ಪ್ರಾಣಿವಧೆಯನ್ನು ಮಾಡಕೂಡದು. ನೀವೆಲ್ಲರೂ ಈ ಆಜ್ಞೆಯನ್ನು ಮನಸ್ಸಿನಲ್ಲಿಟ್ಟಿರಬೇಕು. ಹಾಗೆಂದು ಈ ಶಾಂತ ಮೂರ್ತಿ ಬೀರಪ್ಪದೇವರ ಮುಂದ ಪ್ರತಿಜ್ಞೆಯನ್ನು ಮಾಡಿರಿ.

ಬರ್ಮ : ತೆಪ್ಪಾಯ್ತು, ದೊಡ್ಡ ತೆಪ್ಪಾಯ್ತು ಬುದ್ಧಿ! ತಮ್ಮಿಂದ ಬಲಿಯ ಯಿಸಯ ತಿಳಕೊಂಡ್ವಿ ಇನ್ನು ಮ್ಯಾಕೆ ದೇವ್ರ ಸಾಕ್ಷಿಯಾಗಿ ಬಲಿನ ಕೊಡೋದಿಲ್ಲಾ.

ಬೀರ : ತಾವೇಳ್ದಂತೆ ನಡಕೊಳ್ತೀವಿ (ಎಲ್ಲರೂ ಶಪಥ ಮಾಡುವರು).

* [ಅನುಬಂಧ 5]

ನಾಯಕ : ಸಿದ್ದಣ್ಣಾ! ಕುರಿಯನ್ನು ತೆಗೆದುಕೊಂಡು ಹೋಗು (ಹೋಗುವನು).

[ತಿಮ್ಮಪ್ಪ ನಾಯಕನ ತಾಯಿ – ಬಚ್ಚಮ್ಮ ಬರುವಳು – ನಾಯಕನು ತಾಯಿಗೆ ವಂದಿಸುವನು – ಕುರುಬರೂ ವಂದಿಸುವರು]

ಬಚ್ಚಮ್ಮ : ಮಗೂ! ನಿನಗೆ ಕಲ್ಯಾಣವಾಗಲಿ ನಿಮ್ಮೆಲ್ಲರಿಗೂ ಮಂಗಳವಾಗಲಿ. ಮಗೂ! ಈಗ ಇಲ್ಲಿ ಏನು ಮಾಡುತ್ತಿರುವೆ?

ನಾಯಕ : ತಾಯಿ! ದೇವರ ದರ್ಶನಾರ್ಥ ಬಂದೆ. ನಮ್ಮವರೆಲ್ಲರೂ ಬೀರಪ್ಪ ದೇವರಿಗೆ ಕುರಿಯನ್ನು ಬಲಿ ಕೊಡುವವರಿದ್ದರು. ಬಲಿ ಕೊಡುವುದು ಪಾಪವೆಂದು ತಿಳಿಸಲು ಕಡೆಗೆ ಇವರೆಲ್ಲರೂ ಇನ್ನು ಮುಂದೆ ಹಾಗೆ ಮಾಡುವುದಿಲ್ಲವೆಂದು ಶಪಥ ಮಾಡಿರುವರು. ಹಾಗು ನನ್ನ ನಾಡಿನಲ್ಲಿ ಪ್ರಾಣಿವಧೆಯಾಗಬಾರದೆಂದು ಆಜ್ಞೆಯನ್ನು ವಿಧಿಸಿದೆನು. ಈಗ ನೋಡಿ ನನಗೆ ಹಣ ಸಿಕ್ಕಿದ್ದ ಆನಂದಕ್ಕಾಗಿ ಒಂದು ಕುರಿಯು ಬಲಿಯಾಗುವದಿತ್ತು. ಅದಕ್ಕೆ ಅಡ್ಡಿಯಾದೆ.

ಬಚ್ಚಮ್ಮ : (ಆನಂದದಿಂದ) ಮಗೂ! ಒಳ್ಳೆಯ ಕೆಲಸ ಮಾಡಿದೆ. ನೀನೇ ಧನ್ಯ. ಈಗ ನಿನಗೆ ಸಿಕ್ಕಿರುವ ಹಣವನ್ನು ಏನು ಮಾಡಬೇಕೆಂದಿರುವಿ?

ನಾಯಕ : ಅವ್ವಾ! ಭೂತಾಯಿಯು ನನಗೆ ಆ ಧನವನ್ನು ಅನುಗ್ರಹಿಸಿದ್ದಾಳೆ. ಪ್ರತ್ಯಕ್ಷ ದೇವತೆಯಾದ ನನ್ನ ತಾಯಿಯಾದ ನಿನಗೆ ಆ ಧನವನ್ನೆಲ್ಲ ಅರ್ಪಿಸುವೆನು.

ಬಚ್ಚಮ್ಮ : ಅದರಿಂದ ಪ್ರಯೋಜನವೇನು?

ನಾಯಕ : ಏಕೆ ಪ್ರಯೋಜನವಿಲ್ಲ. ಆ ಧನವೆಲ್ಲವನ್ನು ನಿನ್ನ ಮಕ್ಕಳಾದ ಬಡವರಿಗೆ ದಾನಮಾಡಿಬಿಡು.

ಬಚ್ಚಮ್ಮ : ಮಗೂ! ನೀನು ಹೇಳಿದ ಮಾತು ಎಲ್ಲರೂ ಮೆಚ್ಚತಕ್ಕ ಮಾತಾಗಿದೆ. ಆದರೆ ನಮ್ಮ ಕೋಟೆಯ ಗೋಡೆಗಳು ತೀರಾ ಬಿದ್ದು ಹೋಗಿವೆ. ಇನ್ನು ನಮ್ಮ ಪಟ್ಟಣದ ವ್ಯವಸ್ಥೆಯಾಗಬೇಕೆಂದು ನನ್ನ ಇಚ್ಛೆ.

ನಾಯಕ : ಅಮ್ಮಾ! ಒಪ್ಪತ್ತು ಕೂಳಿಗಿಲ್ಲದೆ ಬಳಲುವ ಬಡವರ ರಕ್ಷಣೆಯ ಅನ್ನದ ಕೋಟೆಯನ್ನು ಕಟ್ಟುವುದು ಬಿಟ್ಟು ಕಲ್ಲ ಕೋಟೆ ಕಟ್ಟುವುದರಿಂದೇನು ಪ್ರಯೋಜನ ರಾಜನಿಗೆ ತನ್ನ ಪ್ರಜರ ಒಲುಮೆಯೇ ಶತೃಗಳಿಂದ ಅಳುಕಲಾರದ

ಕೋಟೆ ಕೊತ್ತಲಗಳು. ಅಮ್ಮ ಪ್ರಜರು ಬಡತನದಿಂದ ಬಾಳುವಾಗ ರಾಜಶಾಸನವನ್ನು ಉಪಯೋಗಿಸಿ, ಅವರಲ್ಲಿ ಇದ್ದ ಧನವನ್ನು ಸೆಳೆದು ಕಟ್ಟಿಸಿದ ಆ ಬಡವರ ಕಣ್ಣೀರಿನ ಕೋಟೆಯು ಎಷ್ಟು ದಿನ ಬಾಳಬಲ್ಲದು. ನನ್ನ ಪ್ರಜರ ವಿಶ್ವಾಸವೇ ಯುದ್ಧದ ಮದ್ದು ಗುಂಡುಗಳು: ಅಮ್ಮಾ! ದೇವರು ಅನುಗ್ರಹಿಸಿದ ಧನ ನನ್ನೊಬ್ಬನದೇ ಅಲ್ಲ. ಎಲ್ಲಾ ಪ್ರಜೆಗಳದು. ನಾನು ಅವರಲ್ಲಿ ಒಬ್ಬನು, ಆ ಧನವನ್ನು ಎಲ್ಲರಿಗೂ ಹಂಚಿಬಿಡು ತಾಯಿ.

ಬಚ್ಚಮ್ಮ : ಧನ್ಯ! ಮಗೂ ನೀನೇ ಧನ್ಯ!! ಈಗ ನಿನಗೆ ಕನಕವು ದೊರೆತಿದೆ. ಆ ಕನಕವು ನೀನೆ ಬಹು ದೊಡ್ಡವನಾಗಿ ಬಾಳು.

ಬರ್ಮ : ತಾಯೋರೇಳಿದ್ದು ನಿಜ. ನಮ್ಮೆಲ್ಲಾಗ್ರೂ ಕನಕದಾಂಗಿರೋ ನಮ್ಮ ತಿಮ್ಮಪ್ಪನಾಯಕರು ಇನ್ಮೇಲೆ ಕನಕನಾಯಕರೆಂದು ಯೆಸರುವಾಸಿಯಾಗಲಿ. ದೇವ್ರೇ! ಬೀರಪ್ಪದೇವ್ರೇ!! ನಮ್ಮ ನಾಯಕರನ್ನು ದೊಡ್ಡೋರನ್ನಾಗಿ ಮಾಡಪ್ಪಾ! (ಎಂದು ದೇವರಿಗೆ ಆರತಿ ಮಾಡುವರು).

(ಅನಂತರ ಬರ್ಮಪ್ಪನು "ಜಯ ಕನಕನಾಯಕ ಜಯ" ಎಂದು ಕೂಗುವನು – ಎಲ್ಲರೂ ಅದರಂತೆ ಅನ್ನುವರು)

## ಒಂದನೇ ಅಂಕ

## ಎರಡನೇ ನೋಟ

– ಶಿವಪ್ಪ ನಾಯಕನ ಪಾಳ್ಯಕ್ಕೆ ಹೋಗುವ ಹಾದಿ –

[ಬೀರಣ್ಣ ತೀವ್ರವಾಗಿ ನಡೆಯುತ್ತಿರುವನು – ಹಿಂದಿನಿಂದ ಬರ್ಮಣ್ಣನು ಕೂಗುತ್ತಾ ಬರುವನು]

ಬರ್ಮ : ಯಲೇ ಬೀರಪ್ಪ! ಅಂಗ್ಯಾಕೆ ಓಡ್ತಿಯೋ ನಿಂಗೆ ಮದುವೆ ಇದ್ದಂಗೆ. ತಟೂಕು ನಿದಾನಮಾಡ.

ಬೀರ : ನಡಿಯೋಕೆ ಕಷ್ಟಾಯ್ತು ಬಿಡೋಪ್ಪ ನಿಂಗೆ ತೀರಾ ಮುದುಕನಾಗಿಬಿಟ್ಟೆ.

ಬರ್ಮ : ಯಲೇ ಆ ಮಾತು ಮಾತ್ರ ಆಡ್ಬೇಡ ನೋಡು. ಇನ್ನೇನನ ಅನ್ನು. ಮುದುಕ ಅನಬೇಡ.

ಬೀರ : ವೋಗಲಿ ಬಿಡಪ್ಪ ಸಿಟ್ಟೇಕೆ ಅರೇದ ವುಡುಗಬಿಡು ನೀನು. ಅಲ್ಲಾ ನೀನು ನಡದಂಗೆ ನಡೆದರೆ ಯಾವಾಗ ಸೇರಬೇಕು ಶಿವಪ್ಪನಪಾಳ್ಯಕ್ಕೇಂತ.

ಬರ್ಮ : ಸೇರ್ತೀವಿಬಿಡೋ ನಂಗೇನೋ ಮನಸಿನಾಗೆ ಬುಗುಲ್ ಬುಗುಲ್ ಆಗ್ತೈತೆ ನೋಡ.

ಬೀರ : ಯಾಕೆ ಬುತ್ತಿ ತಿನ್ನಿಲ್ಲೇನು.

ಬರ್ಮ : ಅಲ್ಲೋ ನಾವೋಗೋ ಕೆಲಸ ಆಗ್ತೈತೋ ಇಲ್ಲಾಂತ ಅನುಮಾನ ಆಗೈತೆ. ಇಲ್ಲಿ ನೋಡು ನಮ್ಮ ದೊರೆಗೇನೋ ಎರಡನೇ ಲಗ್ನ ಮಾಡಿಕೊಂಬೋದು ಏನೇನೂ ಸಮಾದಾನಿಲ್ಲ.

ಬೀರ : ಔದು ಬಿಡೋ ಮೊದಲೇಣ್ತಿ ಸತ್ಮೇಲೆ ಯಾರ್‍ಯಾರೋ ಬಂದು ಕೇಳಿದರು ನಾವೂ ಯೇಳಿದವಿ ಮಾರಾಯ ಊ ಅನವಲ್ಲ.

ಬರ್ಮ : ಯಾಕೋ?

ಬೀರ : ಗಾಬ್ರಿ ಆಗ್ತದೇನೋ ನೋಡ್ಬರ್ಮಣ್ಣ ಬರ್ತಬರ್ತ ಮಳೆ ಬೆಳೆ ಕಡಿಮೆಯಾಯ್ತು ಯಾಕಪ್ಪ ಯೆಣ್ತಿ ಮಕ್ಕಳೂ ಅನಸ್ತೈತೆ ಬಡವರಿಗೆ ಮಕ್ಕಳ್ಯಾಕಪ್ಪಾ ಎನಿಸ್ತೈತೆ.

ಬರ್ಮ : ಯಲಾವುಚ್ಚ ಬಡವರಿಗೇನೋ ಬಾಳ ಮಕ್ಕಳುಟ್ಟೋದು.

ಬೀರ : ಯಾಕೋ?

ಬರ್ಮ : ಬಡವರಿಗೆ ದುಡ್ಡಿಲ್ಲ. ಮಕ್ಕಳುಟ್ಟಿದರೆ ದುಡಿದು ದುಡಿದು ಮನ್ತೆನ ಸುಕವಾಗಿಡ್ತಾರೇಂತ.

ಬೀರ : ಯೇನ್ಮಕ್ಕಳು ಬಿಡಪ್ಪ ಕಾಮಣ್ಣಕ್ಳು ಎಲ್ಲಾ ಆಳ್ಮಾಡಾಕೆ ಕಲಿತಾವೆ. ದುಡೀಲಿಕ್ಕೆ ಕಲೀತಾವೇನು? ಇರ್ಲಿ ಸ್ವಲ್ಪ ಕಡ್ಡೀಪುಡಿತಾ ಅಲ್ಲ ನಾವೋಗೋ ಕಾರ್ಯ ಆಗ್ತೈತೊ ಇಲ್ಲಾಂತ ನಿಂಗ್ಯಾಕೋ ಅನುಮಾನ?

ಬರ್ಮ : ಯಾರ್ಗೇಳಬೇಡೋ ಯೇಳ್ತೀನಿ ಕೇಳು ಶಿವಪ್ಪನಾಯಕ ನಮ್ಮ ದೊರೆಗಳ್ದು ಗುಂಪು ಕಮ್ಮಿಗುಂಪೂಂತ ಯೇಳ್ತಾನಂತೆ.

ಬೀರ : ಕುರುಬ್ರೆಲ್ಲಾ ಒಂದೇನಪ್ಪ ಎಚ್ಚೇನ್ ಕಮ್ಮೇನ.

ಬರ್ಮ : ಯಲಾ ಮಂಗ! ನಿಂಗೆ ತಿಳೀದುಬಿಡು. ಈ ಎಚ್ಚು ಕಮ್ಮಿ ಎಲ್ಲಾದ್ರೊಳಗೂ ಐತೆ ನೋಡು. ಬ್ರಾಂಬ್ರು ನೋಡು ಒಬ್ಬರು ಮನ್ಯಾಗೊಬ್ಬರು ಉಂಬೋದಿಲ್ಲ. ಒಬ್ರೆಣ್ಣೆನೊಬ್ಬ ತಗೋಂಬಾಕಿಲ್ಲ. ಯಿಂಗೇ ನೋಡು.

ಬೀರ : ಫಜೀತೀನೇ ಬಂತು ಬಿಡಪ್ಪ ವೋದ್ಕೋಂಡೋರೆ ಇದೆಲ್ಲ ಮಾಡಿದ್ದು ನೋಡು ಬರ್ಮಣ್ಣ! ಎಚ್ಚು ಕಮ್ಮಿ ಸುರುಮಾಡಿದ್ದೆ ಅವರು. ಬ್ರೆಮ್ಮ ದೇವ್ರು ಈಸು ಕುಲ ಯಾಕೆ ಮಾಡಿದಾಂತ ಪರಸ್ನೆ.

ಬರ್ಮ : ಬೆಮ್ಮದೇವ್ರು ಏನು ಮಾಡ್ತಾನೋ ಮನಿಶಾರ್ನ ಉಟ್ಟಸ್ತ ತಣ್ಣಗೆ ಕುಂತ.

ಬೀರ : ಮತ್ತೆ ಕುಲ ಯಾರು ಮಾಡಿದರಪ್ಪ?

ಬರ್ಮ : ಮನಿಸ್ಯಾರು.

ಬೀರ : ಯಾಕೆ?

ಬರ್ಮ : ಜಗಳ ಅಚ್ಚೆ ತಾವು ಕೂತ್ಗಂಡು ತಿಂಬಾಕೆ. ನಮ್ಮೊಡೆಯ ಯೇಳಿದ್ದು ಕೇಳ್ಲಿಲ್ಲೇನು. ಈ ಪರಪಂಚದಾಗೆ ನಂದು, ನನಗೆ ಅಂತ ಯಾವಾಗ ಮೊದಲಾಯಿತೋ ಆಗಲೇ ಬಂತ್ನೋಡು ಕಳ್ತನಬಂತು, ಸುಳ್ತನಬಂತು, ಮೋಸಬಂತು, ದ್ವೇಸಬಂತು, ರೋಗಾಬಂತು, ಚಾಮಾಬಂತು – ಎಲ್ಲಾ ಬಂತು. ಇದು ಎಂದೋಗಬೇಕೇನೋ ಬೀರಪ್ಪನೇ ಬಲ್ಲ.

ಬೀರ : ಬರ್ಮಣ್ಣ! ನಂಗೊಂದು ಅನಿಸ್ತದೆ ನೋಡು. ಈ ಪರಪಂಚದಾಗೆ ಯಿರೋ ಮನಿಸ್ಯಾರೆಲ್ಲ ಕುರುಬರೇ ಆಗಿಬಿಟ್ರೆ ಆವಾಗ ಎಲ್ಲಾ ಸರಿವೋಗ್ತೈತೆ ನೋಡು.

ಬರ್ಮ : ಒಳ್ಳೇ ಬುದ್ವಂತನೋ ನೀನು. ಬುರುಸ್‌ಪತಿ ಅಲ್ಲೋ ಬಿರಾಮ್ರು ಕುರುಬರೆಂಗಾತರೆಲೆ.

ಬೀರ : ಯಾಕಾಗಾಕಿಲ್ಲ? ಮೊಟ್ಟಮೊದಲು ಬಿರ್‍ಯಾಮ್ರು ಕುರಿಕಾಯ್ತಿದ್ದಿಲ್ಲೇನು?

ಬರ್ಮ : ಸಾಕು ನಿನ್ನ ಪರಸಂಗ. ವೊತ್ತಾಯ್ತು ನಡೆಯಪ್ಪ.

ಬೀರ : ನಂಗೊಂದು ಪದಾ ಬತ್ರೈತೆ ಆಡ್ಲಾ.

ಬರ್ಮ : ಯಾತರ ಪದ ನಡೆಯೋ ಸುಮ್ನೆ.

ಬೀರ : ಬೇಸ್ಯೆತೆ ಕೇಳೋ [ಎಂದು ಕೆಮ್ಮಿ ಗಂಟಲು ಸರಿಮಾಡಿಕೊಂಡು ಹಾಡುವನು].

* [ಅನುಬಂಧ ೬]

ಬರ್ಮ : ಸಾಕು ನಡಿಯೋ ಮಾರಾಯ. ಗಂದರ್ವ ಗಿಂದರ್ವ ಆಡಿದಂಗಾಡ್ತೀಯಲ್ಲಲೆ.

ಬೀರ : ತಟೂಕು ನಿದಾನಿಸೋ ಮತ್ತೆ ಅಲ್ಲಾ! ಶಿವಪ್ಪನಾಯಕ ನಮ್ಮ ದೊರೆಗಳ ಗುಂಪು ಕಮ್ಮೀಂತ ತನ್ನ ಮಗಳ್ನ ಕೊಡ್ಡೋದಿಲ್ಲಾಂದ್ರೆ ಏನ್ಮಾಡಬೇಕು?

ಬರ್ಮ : ಯೇನ್ಮಾಡಬೇಕು ಕೈಬೀಸಿಕೋತ ವಾಪಾಸು ಬರಬೇಕು.

ಬೀರ : ಬಿಡಾ ಅಂತ ಮಾತಂದ್ರೆ ಸುಮ್ನಿರೋದೇನು.

ಬರ್ಮ : ಅಲ್ಲೇನೂ ಗಲಾಟೆ ಮಾಡಬೇಡೋ ಮಾರಾಯ ಯಿಲ್ಲಂದ ಮೇಲೆ ನೋಡೋಣ. ಅಂತಾದ್ದೇನಾದ್ರು ಬಂತೋ ಸ್ವತೇವೆ

ಯಿದ್ದ ಜರುಗುತ್ತೈತೆ. ನಮ್ಮ ನಾಂಯಕರು ಶಿವಪ್ಪನಾಯಕರನ್ನು ದಂಸಮಾಡ್ತಾರೆ....

ಬೀರ : (ಮೀಸೆ ತಿರುವಿ) ದಂಸಮಾಡಿ ವಡ್ತಾವ್ಯೆದು ಆ ಪಿಳ್ಳೇನ ಕರತಂದು ನಮ್ಮ ದೊರೆಗಳಿಗೆ ಮದುವೆ ಮಾಡ್ತೀನಿ.

ಬರ್ಮ : ನೀನು ಒಳ್ಳೇ ಅಮ್ಮೀರ ಬಿಡು.... ಯಿಂದ್ಲಜಿತ್ತು ನಮ್ಮಪ್ಪ ಬೀರಯ್ಯ!! ಯಿದ್ದ ಬರದಂತೆ ಮಾಡೋ.

[ಹೋಗುವರು]

ಒಂದನೇ ಅಂಕ ಮೂರನೇ ನೋಟ

## – ಕನಕನಾಯಕರ ಮನೆ –

[ತಾಯಿ ಬಚ್ಚಮ್ಮನು ರೋಗಪೀಡಿತಳಾಗಿ ಮಂಚದಮೇಲೆ ನರಳುತ್ತಿರುವಳು, ನಾಯಕರು ದೈವಪ್ರಾರ್ಥನೆ ಮಾಡುತ್ತಿರುವರು]

ಕನಕ : ಪರಮಾತ್ಮ! ನನ್ನ ತಾಯಿಯ ಕಷ್ಟಗಳನ್ನು ದೂರಮಾಡು. ಆ ತಾಯಿಗಾಗಿ ಮರುಗುವ ನನ್ನ ಹೃದಯಕ್ಕೆ ಶಾಂತಿಯನ್ನು ಕೊಡು. ಇದಕ್ಕಿಂತಲು ಹೆಚ್ಚಿಗೆ ನಿನ್ನನ್ನು ಬೇಡಲಾರೆ [ತಾಯಿಯ ನರಳುವ ಧ್ವನಿ ಕೇಳಿ] ಅಮ್ಮಾ! ಅಮ್ಮಾ!! [ಎಂದು ಸಮೀಪಿಸಿ] ಅಮ್ಮಾ!

ಬಚ್ಚಮ್ಮ : (ಆಯಾಸದಿಂದ ಕಣ್ಣು ತೆರೆದು) ಕನಕಾ!

ಕನಕ : ಏನು ತಾಯಿ!

ಬಚ್ಚಮ್ಮ : ಇಲ್ಲಿ ಬಾ ಕಂದ ಸಮೀಪದಲ್ಲಿ ಕುಳುತುಕೋ.

ಕನಕ : ಅಮ್ಮಾ! ಈಗ ಜೀವಕ್ಕೆ ಸಮಾಧಾನವೆನಿಸುವುದೆ?

ಬಚ್ಚಮ್ಮ : ಸಮಾಧಾನ! ಎಲ್ಲಿಯ ಸಮಾಧಾನಪ್ಪ.

ಕನಕ : ತಾಯಿ ನಿನಗೆ ರೋಗಬಾಧೆಗಿಂತಲು ಮನೋಬಾಧೆಯೇ ಹೆಚ್ಚಾಗಿರಬೇಕೆಂದು ತೋರುತ್ತದೆ. ಆ ಮನೋಬಾಧೆಯನ್ನು ನನ್ನ ಮುಂದೆ ಹೇಳಬಾರದೇನಮ್ಮ.

ಬಚ್ಚಮ್ಮ : ಕನಕಾ! ನಿನಗೆ ಹೇಳಬಾರದೆಂಬುವದೇನೂ ಇಲ್ಲ.

ಕನಕ : ಹಾಗಾದರೆ ಹೇಳಬಹುದಲ್ಲಾ ತಾಯಿ

ಬಚ್ಚಮ್ಮ : (ಸುಮ್ಮನಿರುವಳು)

ಕನಕ : ಅಮ್ಮಾ! ಮತ್ತೇನು ಯೋಚನೆ?

ಬಚ್ಚಮ್ಮ : ಈ ಯೋಚನೆಯೇ ನನ್ನ ರಕ್ತವನ್ನು ದಿನದಿನಕ್ಕೂ ಹೀರುತ್ತದೆ. ಕನಕಾ ನನ್ನನ್ನು ಎಬ್ಬಿಸಿ ಕೂಡಿಸು.

ಕನಕ : ಏತಕ್ಕೆ ಅಮ್ಮಾ! ಎದ್ದು ಕುಳಿತರೆ ಆಯಾಸ ಹೆಚ್ಚುವುದು.

ಬಚ್ಚಮ್ಮ : ಏನೂ ಇಲ್ಲ. ಎಬ್ಬಿಸು. ನಿನ್ನ ಮುದ್ದು ಮುಖವನ್ನು ಕಣ್ಣ ತುಂಬ ನೋಡಬೇಕೆಂದು ಅನಿಸಿದೆ.

[ಕನಕನು ಎಬ್ಬಿಸಿ ಕುಳ್ಳಿರಿಸುವನು]

ಕನಕಾ! ನನ್ನ ಮಾತನ್ನು ಮೀರುವದಿಲ್ಲವಲ್ಲಾ?

ಕನಕ : ಮಗನ ಮೇಲೆ ಸಂಶಯವೇ?

ಬಚ್ಚಮ್ಮ : ಇಲ್ಲ ಕನಕಾ! ಮ – ದು – ವೆ ಮಾಡಿಕೋ.

ಕನಕ : ಅಮ್ಮಾ! ಇದೇನಿದು ನನಗೆ ಮದುವೆಯೇ.

ಬಚ್ಚಮ್ಮ : ಅಹುದು. ವಂಶವೃದ್ಧಿಗಾಗಿ ನೀನು ಮದುವೆ ಮಾಡಿಕೊಬೇಕು.

[ಅನುಬಂಧ ೭]

ಕನಕ : ತಾಯೆ! ನನ್ನೊಬ್ಬನ ವಂಶವು ಬೆಳೆಯದಿದ್ದರೆ ಪ್ರಪಂಚಕ್ಕೇನಾದರೂ ಕೊರತೆಯಾಗುವುದೆ?

ಬಚ್ಚಮ್ಮ : ಪ್ರಪಂಚಕ್ಕೆ ಕೊರತೆಯಲ್ಲ. ಇದು ನಮ್ಮ ಕೊರತೆ. ಮನೆತನ ಮುಂದೆ ಸಾಗಬೇಕೆಂಬ ಆಸೆ. ಮಕ್ಕಳಿಲ್ಲದವರಿಗೆ ಗತಿ ಎಲ್ಲಿಯದು?

ಕನಕ : ಅವ್ಮಾ! ನೀನು ಯಲ್ಲವನ್ನು ಬಲ್ಲವಳಾಗಿ ಹೀಗೆ ಹೇಳಬಹುದೆ?

ಬಚ್ಚಮ್ಮ : ಕನಕಾ! ನಿನ್ನ ತಾಯಿಯ ಮನದ ಪರಿತಾಪವನ್ನು ಬಲ್ಲೆಯಾ

ಕನಕ : ಬಲ್ಲೆನಮ್ಮ. ನಿಮ್ಮ ಹೊಟ್ಟೆಯ ಕರುಳನ್ನು ಕತ್ತರಿಸುವ ಕತ್ತಿಯ ಹರಿತವನ್ನು ಬಲ್ಲೆ. ಆದರೆ ಮಾಡುವದೇನ ತಾಯಿ! ನಾನಂತು ಈ ಜನ್ಮದಲ್ಲಿ ಒಬ್ಬಳನ್ನೆ ಪ್ರೇಮಿಸಿದ್ದು ಅವಳು ಆ ಪ್ರೇಮವನ್ನೆಲ್ಲ ಸೆಳೆದುಕೊಂಡು ಪರಲೋಕವಾಸಿಯಾಗಿರುವಾಗ ನನ್ನಲ್ಲಿ ಮತ್ತೆ ಪ್ರೇಮಾಂಕುರವೆಲ್ಲಿಯದು.

ಬಚ್ಚಮ್ಮ : ತಾಯಿಯ ಮಾತನ್ನು ಧಿಃಕರಿಸುವುದೆ?

ಕನಕ : ಅವ್ವಾ! ನಿನಗೆ ನಾನೇನು ಹೇಳಬಲ್ಲೆ. ಅಪರಾಧದ ಹೊರೆಯನ್ನು ಮಾತ್ರ ಹೊರಿಸಬೇಡ.

ಬಚ್ಚಮ್ಮ : ಮಗೂ! ನಿನಗಾಗಿ ಶಿವಪ್ಪನಾಯಕನ ಮಗಳನ್ನು ಕೇಳಿಬರಲು ನಮ್ಮವರನ್ನು ಕಳಿಸಿದ್ದೇನೆ. ನೀನು ಹೀಗೆ ಮಾತನಾಡಿದರೆ ಮುಂದೇನು ಗತಿ.

ಕನಕ : (ಆಶ್ಚರ್ಯಗೊಂಡು) ರಾಮಾಪುರದ ಶಿವಪ್ಪನಾಯಕರ ಬಳಿಗೆ ಕಳುಹಿಸಿದಿರೇನು?

ಬಚ್ಚಮ್ಮ : ಅಹುದು. ಅವರು ವಿಚಾರಿಸಿಕೊಂಡು ಈಗ ಬರಬಹುದು.

ಕನಕ : ಅಮ್ಮಾ! ಈ ವಿಷಯ ನನಗೆ ಹೇಳಲಿಲ್ಲವಲ್ಲ!

ಬಚ್ಚಮ್ಮ : ನಿನ್ನಿಂದ ಅದಕ್ಕೆ ಅಡ್ಡಿಯಾಗಬಹುದೆಂದು....

ಕನಕ : ತಾಯಿ! ಈ ವಿಷಯದಲ್ಲಿ ಮಾತ್ರ ನೀವು ಚೆನ್ನಾಗಿ ಯೋಚಿಸಲಿಲ್ಲ.

ಬಚ್ಚಮ್ಮ : ಶಿವಪ್ಪನಾಯಕರ ಮಗಳು ಅತಿಚಲುವೆ. ಹಾಗೂ ಒಳ್ಳೆಯ ಸುಗುಣವತಿ. ನಿನಗೆ ತಕ್ಕವಳು. ಅನುಕೂಲ ಬಾಂಧವ್ಯ. ಅಂದಮೇಲೆ ಇದರಲ್ಲಿ ಯೋಚಿಸುವುದೇನಿದೆ.

ಕನಕ : ಅಮ್ಮಾ! ಕ್ಷಮಿಸಬೇಕು. ಹೆಚ್ಚು ಬಲವಂತಪಡಿಸಬೇಡ. ತಮ್ಮ ಪಾದಕ್ಕೆರಗಿ ಬೇಡಿಕೊಳ್ಳುವೆನು. (ಎಂದು ಪಾದಕ್ಕೆ ನಮಸ್ಕರಿಸುವನು. ಬಚ್ಚಮ್ಮನು ಕಣ್ಣುತುಂಬಾ ನೀರುತಂದು)

ಬಚ್ಚ ಮ್ಮ : ಕನಕಣ್ಣಾ! ಯೇನುಮಾಡಲಿ ಮಗೂ! ನಿನ್ನ ತಾಯಿಯ ಕಡೇ ಬಯಕೆಯು ಮಾತ್ರ ಉಳಿದಿರುವುದು.

ಕನಕ : ಅಮ್ಮಾ! ಆ ಬಯಕೆ ಯಾವುದು.

ಬಚ್ಚಮ್ಮ : ಕನಕಪ್ಪಾ! ವಂಶ ಬೆಳೆಯಲು ಮದುವೆಯಾಗೆಂದು ಎಷ್ಟು ಹೇಳಿದರೂ ನೀನು ಒಪ್ಪಲಿಲ್ಲ. ಆದರೆ ಪ್ರಪಂಚದಲ್ಲಿರುವ ಸ್ತ್ರೀಯರೆಲ್ಲರನ್ನು ನಾನೆಂದು ತಿಳಿಯುವಿಯಾ?

ಕನಕ : (ಆನಂದದಿಂದ) ಅಮ್ಮಾ! ಇನ್ನು ಸಂಶಯವೇ. ಜಗದ ಸ್ತ್ರೀಯರನ್ನು ನನ್ನ ತಾಯಿಯಂತೆ ಭಾವಿಸುತ್ತೇನೆ. ಪಾದದಾಣೆಯಾಗಿಯೂ ಇದು ಸತ್ಯ.

ಬಚ್ಚಮ್ಮ : (ಆನಂದದಿಂದ ಮಗನನ್ನು ನೇವರಿಸಿ) ದೇವರು ನಿನಗೆ ನಿತ್ಯಾನಂದವನ್ನು ಕೊಡಲಿ. ಕನಕಾ! ನಿನ್ನಂಥ ಮಗನನ್ನು ಕರುಣಿಸಿದ ದೇವರ ಋಣವನ್ನು ಹೇಗೆ ತೀರಿಸಲಪ್ಪ!

[ರಾಮಾಪುರಕ್ಕೆ ಹೋದವರು ಬಂದು ವಂದಿಸುವರು]

ಕನಕ : ನೀವು ರಾಮಾಪುರದಿಂದ ಬಂದವರೆ?

ಬರ್ಮ : ಅಹುದು ದೊರೆಗಳೆ.

ಕನಕ : ವಿಚಾರವೇನಾಯಿತು?

ಬೀರ : ನಾವು ಇಲ್ಲಿಂದ ಅಮ್ಮನವರ ಅಪ್ಪಣೆ....

ಕನಕ : ಅದು ಬಲ್ಲೆ. ಆ ನಾಯಕನೇನೆಂದನು.

ಬರ್ಮ : ಏನು ಹೇಳುವುದು ದೊರೆ....

ಬೀರ : ಆ ಸಂಗತಿ ಹೇಳಲು ಬರುವಂತೆಯೇ ಇಲ್ಲ.

ಕನಕ : ಅದೇನು. ಹೇಳಬಾರದ ವಿಶೇಷವೇನು.

ಬರ್ಮ : ಆ ನಾಯಕ ಬಾಳ ಜೋರಾಗಿ ಇದ್ದಾನೆ ದೇವರು.

ಕನಕ : ಅದುಕೂಡ ಬಲ್ಲೆ. ಅವನೇನಾದರೂ ಧಿಃಕರಿಸಿ ಮಾತನಾಡಿದನೆ?

ಬರ್ಮ : ಔದು ದೊರೆ.

ಬಚ್ಚಮ್ಮ : ಧಿಃಕರಿಸಲು ಕಾರಣ? (ಸುಮ್ಮನಿರುವಳು)

ಬಚ್ಚಮ್ಮ : ಇದ್ದ ವಿಷಯ ಹೇಳಲು ಭಯವೇಕೆ.

ಬರ್ಮ : ನಾಲಗೆಯೇ ವಳ್ಳೋದಿಲ್ಲ.

ಬಚ್ಚಮ್ಮ : ಸಂಕೋಚವೇಕೆ. ನನ್ನ ಮಗಳನ್ನು ಕೊಡಲು ಇಷ್ಟವಿಲ್ಲವೆಂದು ಹೇಳಿದನೆ?

ಬೀರ : ಅಂಗೇಳಿದ್ರೆ ಯಾರಿಗೂ ತೊಂದ್ರಿದ್ದಿಲ್ಲ.

ಬಚ್ಚಮ್ಮ : ಈಗ ಅವನಾಡಿದ ಮಾತಾದರೂ ಏನು?

ಬರ್ಮ : ತಾಯಿ! ನಿಮ್ಮ... ಕುಲ... ಲ... ಕೀ...

ಕನಕ : ಏನು! ಏನು.... ನಿಮ್ಮ....

ಬೀರ : ಕುಲಕೀಳೆಂದು ನನ್ನ ಮಗಳ್ನ ಕೊಡುವುದಿಲ್ಲಾಂತ ಕಂಡಿತ ಏಳಿ ಬಿಟ್ಟ.

ಬಚ್ಚಮ್ಮ : (ವೇದನೆಯಿಂದ) ಕೀಳು.... ಕುಲಕೀಳು.... ನಮ್ಮ ಪವಿತ್ರ ವಂಶವು ಕೀಳು.... ಅಯ್ಯೋ.... ನನ್ನ ಜೀವನಾಡಿಗಳು ಎಳೆಯುತ್ತಿವೆ. ಸ್ವಲ್ಪ.... ನೀ.... ರು.... ದಾ.... ಹ.... (ಕನಕನು ನೀರು ಕುಡಿಸುವನು) ಕನಕಪ್ಪ! ನೀನು ಮಹಾತ್ಮನಾಗು. ನಿನ್ನಿಂದ ನಿಜವಾದ ಧರ್ಮವು ಉದ್ಧಾರವಾಗಲಿ. ಜಾತಿಭೇದವು ದೂರವಾಗಲಿ. ದೇವಾ! ಬೀರಪ್ಪಾ!....

[ಸಾಯುವಳು. ಕನಕನಾಯಕನು ಕಣ್ಣೀರಿಡುವನು]

[ಬರ್ಮಣ್ಣ, ಬೀರಣ್ಣರು ಕೆಳಮೋರೆಮಾಡಿ ದುಃಖಿಸುವರು]

ಕನಕ : ದೇವಾ! ಮೊದಲು ಒಂದು ರತ್ನವನ್ನು ಕಸಿದುಕೊಂಡದ್ದಲ್ಲದೆ ಈ ಒಂದು ಭಾಗ್ಯರತ್ನವನ್ನಾದರೂ ಉಳಿಯದೆ ಮಾಡಿದೆಯಾ. ನಿನ್ನ ಇಚ್ಛೆ ಜಗತ್ತೆಲ್ಲವೂ ನಿನ್ನ ಅಧೀನ. ಅಂದಮೇಲೆ ನಿನ್ನ ಸೃಷ್ಟಿಯಲ್ಲಿ ಲೋಪವನ್ನು ಎಣಿಸಲು ನಾನೆಷ್ಟರವನು. ಈ ಪವಿತ್ರ ತಾಯಿಯ ಆತ್ಮಕ್ಕೆ ಶಾಂತಿಯನ್ನು ಕರುಣಿಸು. (ಎಂದು ದುಃಖದಿಂದ ಎದ್ದು ತಾಯಿಯ ಮುಖವನ್ನು ಮುಚ್ಚಿ) ಆಹಾ ಕುಲ! ಕೀಳುಕುಲ!! ಈ ನುಡಿಯೇ ನನ್ನ ಪ್ರೇಮದೇವತೆಯ ಜೀವವನ್ನು ಹೀರಿದ ಯಮಪಾಶ.... ಪಾಪೀ! ಶಿವಪ್ಪನಾಯಕ! ನನ್ನ ಅಹಂಕಾರ ವರ್ತನೆಯ ಪರಮಾವಧಿಯಾಯಿತೆಂದು ತಿಳಿ. ಯಾವ ನಿನ್ನ ನುಡಿಯಿಂದ ನನ್ನ ಜೀವರತ್ನ ಒಡೆದು ಹೋಯಿತೋ ಯಾವ ನಿನ್ನ ಗರ್ವಾಂಧತೆಯಿಂದ ತಾಯಿಯಿಲ್ಲದ ಮಗನಾದೆನೋ ನಾನು ಇಂದಿನ ನಿನ್ನ ತಾಯಿಯ ಪಾದ ಸನ್ನಿಧಿಯಲ್ಲಿ ಆಣೆಮಾಡಿ ಹೇಳುವೆನು ನನ್ನ ತಾಯಿಗೆ ಒದಗಿದ ಹಾನಿಯ ಸೇಡನ್ನು ತೀರಿಸದಿದ್ದರೆ ಕೀಳೆಂದು ನುಡಿದ ನಿನ್ನ ನಾಲಿಗೆಯನ್ನು ಸೀಳದಿದ್ದರೆ ಪರವಧೂ ಸಂಗ ಪಾಪಫಲವು ಲಭಿಸಲಿ. (ಬರ್ಮಣ್ಣ ಬೀರಣ್ಣರ ಕಡೆಗೆ

ನೋಡಿ) ಹೋಗಿರಿ ನಾಳೆಯೇ ರಾಮಾಪುರದ ಮೇಲೆ ಸೈನ್ಯವು ಹೊರಡಬೇಕೆಂದು ತಿಳಿಸಿರಿ.

(ಹೋಗುವರು) (ಕನಕನಾಯಕ ತಾಯಿಯ ಪಾದತಲದಲ್ಲಿ ಕುಳಿತು ಪ್ರಾರ್ಥಿಸುತ್ತಿರುವಲ್ಲಿ)

[ಅನುಬಂಧ ೯]

– ತೆರೆ –

ಒಂದನೇ ಅಂಕ

## ನಾಲ್ಕನೇ ನೋಟ

## -ಶಿವಪ್ಪನಾಯಕನ ಪಾಳ್ಯ -

[ತೆರೆಯಲ್ಲಿ ಅದ್ಭುತವಾದ ಯುದ್ಧದ ಗದ್ದಲ ಕೇಳಿಸುವದು ತರುವಾಯ ಭಯದಿಂದ ಬೀರಣ್ಣನು ಪ್ರವೇಶಿಸುವನು.]

ಬೀರ : ಅಬ್ಬ ಬ್ಬ ಬ್ಬ ಬ್ಬ ಯೇನಿದ್ದ ಯೇನ್ಕತೆ ಅದೇಸುಮಂದಿ ಸತ್ತು ಮುದ್ದೆಯಾದ್ರು, ಅದೇಸು ಮಂದಿ ಕಾಲ್ಕೈ ಮುರಕೊಂಡ್ರು, ಅದೇಸು ಮಂದಿ ಕಡಕೊಂಡು ನೆಲಕ್ಕೆ ಬಿದ್ರು. ಯಿದ್ರ ಯಿಸ್ಯಾ ಯಿಂಗೇಂತ ಯೇಳಕೆ ಬರ್ದು ಬಿಡಪ್ಪ. ಯಿಂತಾ ಗದ್ದಲದಾಗ ಸಪ್ಳಿಲ್ದಂಗೆ ಪುಸಿಕ್ಕೊಂಡು ಬಂದದ್ದು ಪಸಂದಾಯ್ತು ಯಿಲ್ಲಿದ್ರೆ ಯಾವೋನ ಕೈಯ್ಯಾಗನ್ನ ಸಿಕ್ಕಿದ್ರೆ ಅಪ್ಪಳಾದಂಗಾಗುತ್ತಿದ್ದೆ ಅಲ್ಲ. ಆ ಬರ್ಮಣ್ಣ ಎಲ್ಲಿಗೋದ್ನೋ ಯೀ ಗದ್ದಲದಾಗ ಯೆಲ್ಲಾ ನೋಡ್ದೆ ಅವನ ಸುಳಿವೇ ಇಲ್ಲ. ಮತ್ತೆಲ್ಲಾದ್ರು ಯೀ ಗದ್ಲದಾಗೆ ಅವರಿವರ ಜಗಳಾಟ್ದಲ್ಲಿ ಯಿರಿಕ್ಕೊಂಡು ಸತ್ನೋಯೇನೋ. ಔದು ಬಿಡು. ಸತ್ತೇ ಇರ್ತಾನೆ. ಇಲ್ದಿದ್ದರೆ ಕಾಣದಂಗಿರ್ತಾನೇನು ಯೇನೋ ಪಾಪ ಮುದುಕ.

ಬರ್ಮ : (ಯುದ್ಧದ ವಿಷಯ ತಿಳಿದುಕೊಂಡು ಹೋಗಲು ಬಂದವನು ಈ ಮಾತನ್ನು ಕೇಳಿ ಸಿಟ್ಟಿನಿಂದ) ಎಲೇ ಉಡುಗ! ಆ ಮಾತ ಅನಬೇಡ. ಅನಬ್ಯಾಡ ಅಂತ ಯೇಸ್ಸಾರ್ತೊ ಯೇಳೀನಿ ಮತ್ತೆ ಅದೆ.

ಬೀರ : (ತಿರುಗಿನೋಡಿ) ಯಲಯಿವನ (ಎಂದು ಗಾಬರಿಯಿಂದ ಭೂತವೆಂದು ಭ್ರಂತುಗೊಂಡು ಬಾಯಿ ತೆರೆದು ನೋಡುತ್ತಿರುವನು).

ಬರ್ಮ : ಅಂಗ್ಯಾಕೆ ಬಾಯ್ತೆರಕೊಂಡಲೆ ಜೋಳ್ದಮುದ್ಗೆ ಬಾಯಿ ತೆರಕೊಂಡಾಂಗೆ.

ಬೀರ : (ಗುರ್ತಿಸಿ) ಅವನೋಪ್ಪೋ ಅವನೆ.

ಬರ್ಮ : ಯಾರಲೆ ಯ್ಯಾಕೆ ದೆವ್ವಗಿವ್ವ ಬಡಕೊಂಡ್ತೇನು.

ಬೀರ : (ಅನುಮಾನಬಿಟ್ಟು) ದೆವ್ವಿಲ್ಲಗಿವ್ವಿಲ್ಲ ಬಿಡೋ ಮಾರಾಯ. ಅಲ್ಲ ನೀನು ಯತ್ಲಾಗಿಂದ ಬಂದೆ.

ಬರ್ಮ : ಯಾಕೆ ಊರ್ಲಿಂದ.

ಬೀರ : (ಆಶ್ಚರ್ಯದಿಂದ) ಆ.... ಅಂಗಾದ್ರೆ ನೀನು ಯಿದ್ದಕ್ಕೆ ಬಂದಿದ್ದಿಲ್ಲೇನು.

ಬರ್ಮ : ಇಲ್ಲ.

ಬೀರ : ಮತ್ತೆಲ್ಲಿದ್ದಿ.

ಬರ್ಮ : ಊರಾಗ

ಬೀರ : ಯಲ್ಲಾರು ಯಿದ್ದಕ್ಕೆ ವೋಗಿದ್ರೆ ನೀನೂರಾಗೆ ಯೇನಾಡ್ತಿದ್ಯಾ

ಬರ್ಮ : ಊರು ಕಾವಲಿಗೇಂತ ಬಿಟ್ಟೋಗಿದ್ರು

ಬೀರ : ದೇವ್ರು ದೊಡ್ಡೋನು ಬಿಡು. ಯಿದ್ದದಾಗೆ ನಿನ್ಮಕ ಕಾಣ್ಲಿಲ್ಲ. ಸತ್ನೇನೋ ಅಂದ್ಕೊಂಡಿದ್ದೆ.

ಬರ್ಮ : ನಾನ್ಯಾಕೆ ಸಾಯ್ತಿನೆಲೆ. ಯಿದ್ದಕ್ಕೋದೋನು ನೀನೇ ಸತ್ತಿಲ್ಲ.

ಬೀರ : ಯಾಕೆ ಸಾಯ್ಲಿಕ್ಕೆ ನಾನೇನು ಕಮ್ಮಿಮಗಾಂತ ತಿಳಕೊಂಡ್ಯಾ ಬರ್ಮಣ್ಣ. ಯಿದ್ದದಾಗ ನನ್ನ ಪರಾಕ್ರಮ ನೀನು ನೋಡ್ಲಿಲ್ಲ. ಕೋಲ್ಬೇಡ ಗುದಿಗೆಬೇಡ. ಒಂದೋದೇಟ್ಬಿದ್ರೆ ಗಿಮಿಗಿಮಿ ತಿರುಗಿ ನೆಲಕ್ಕೆ ಬೀಳ್ತಿದ್ರು, ಏನಂಬ್ತಿ.

ಬರ್ಮ : ಅಂಬೋದೇನು ಬಿಡೋ ನೀನಂತೋನೆ ಉತ್ತರಕುಮಾರನಂಗೆ ಯಿರ್ಲ ಅಂಗಿದ್ದ ಮಾಡೋದ್ಬಿಟ್ಟು ಇಲ್ಯಾಕೆ ಬಂದೆ?

ಬೀರ : ಅಲ್ಲಪ್ಪ ಊರು ಕಾಯೋದ್ಬಿಟ್ಟು ನೀನ್ಯಾಕೆ ಇಲ್ಗೆ ಬಂದೆ?

ಬರ್ಮ : ಯಿದ್ದ ಯಂಗೆಂಗಾಯ್ತೋ ಯಾರ್ಯಾರು ಗೆದ್ರೋ ಯಿಸಾರಿಸಿಕೊಂಡು ವೋಗಾನಾಂತ ಬಂದ್ನೆಪ್ಪ.

ಬೀರ : ಆ... ಅದೇ ಸಮಾಶ್ಯಾರ ಯೇಳಾಣಾಂತ ನಾನು ಬಂದಿದ್ದು.

ಬರ್ಮ : ಸರೇತುಬಿಡು ಅಂಗಾದ್ರೆ, ಯಿದ್ದದಾಗೆ ಯಾರ್‍ಯಾರು ಗೆದ್ರು, ಯಾರ್‍ಯಾರು ಸೋತ್ರು ನಮ್ಮೊರ್‍ಗೇನು ತಂದ್ರೆಯಿಲ್ಲಲ್ಲ.

ಬೀರ : ಯಂತಾ ಮಾತಾಡ್ತಿಯೋ ಯೀರಸೂರ ಯಿಕ್ರಮಾರ್ಕ ನಮ್ಮೊರೀಗೆ ತೊಂದ್ರೆ ಯೇನ್ಬಂತೋ ಒಂದೊಂದುಸಾರಿ ಕತ್ತಿ ಅಂಗ್ಬೀಸ್ದ್ರೆ, ಒಂಬೊತ್ತು ಒಂಬೊತ್ತು ಮಂದಿ ಕಡಕೊಂಡು ಕೆಳ್ಗೆ ಬೀಳ್ತಿದ್ರು.

ಬರ್ಮ : ನೀನೇಳ್ದಂಗೆ ಯಿಕ್ರಮಾರ್ಕನೇ ನಮ್ಮೊರ್‍ಯಾಗಿ ವುಟ್ಟಿಬಂದಾ ನ್ನೋಡು. ಅಂದ್ರೆ ಶಿವಪ್ಪನಾಯಕನ ಮಂದೆಲ್ಲಾ ಸತ್ರೇನು?

ಬೀರ : ಸತ್ರೂಂತ ಯೇನ್ಕೇಳ್ತಿಯೋ ಯಿಟೊತ್ತಿಗೆ ನಮ್ಮೊರೆಗಳ ಸೀಟಿ ಯಮಲೋಕ್ದಾಗೆ ತೋರಿಸಿದ್ದಾರು.

ಬರ್ಮ : ಅಂಗಾದ್ರೆ ಆ ಶಿವಪ್ಪನಾಯಕೇನಾದ?

ಬೀರ : ಅವನಾ ನಾವು ಪಿಳ್ಳ್ಯಾನ ಕೇಳಾಕೋದಾಗ ನಮ್ಮುಂದೆ ಯೇನೆಗೆಗ್ರಿ ಮಾತಾಡಿದ್ನಪ್ಪ ಅಂತೋನ್ನ ನಮ್ಮೊರೆ ಯಿಡಕೊಂಡು ಗುದ್ದೀ ಗುದ್ದೀ ಜ್ವಾಳದಮುದ್ದೆ ಮಾಡ್ದಂಗೆ ಮಾಡಿ ಕಡೆಗೆಣಮಲಗಿಸ್ದ.

ಬರ್ಮ : ಬಲೇನಮ್ಮಪ್ಪ ನಮ್ಮದೊರೆ ಮನಿಸ್ಯಾ ಅಲ್ಬಿಡಪ್ಪ ದೇವ್ರು ಕಡಿಗೆ ಆ ನಾಯಕಗೆ ಒಳ್ಳೇ ಬುದ್ಧಿ ಕಲಿಸ್ದನೋಡು.

ಬೀರ : ಸತ್ಮೇಲೆ ಬುದ್ದಿ ಬಂದ್ರೆ ಯೇನ್ಮಾಡ್ತಿಯೋ

ಬರ್ಮ : ಅಂಗಾದ್ರೆ ಯಿದ್ದ ಮುಗೀತೆನ್ನು

ಬೀರ : ಮುಗಿದೇವೋಯ್ತು. ವುಳಿದಿರೋ ಆ ಶಿವಪ್ಪನಾಯಕನ ಮಗಳನ್ನು ಕರಕೊಂಡು ಊರಿಗೆ ಬರ್ತಾರ.

ಬರ್ಮ : ಏನು ಪಿಳ್ಳೇನ ಕರ್ಕೊಂಡು ಬರ್ತಾರೇನು ವೂರಿಗೆ

ಬೀರ : ಔದು.

ಬರ್ಮ : ಅಂಗಾದ್ರೆ ಬಾ ಈ ಸಂತೋಷದ ಸುದ್ದಿ ವೂರಾಗೇಳೋನು.

ಬೀರ : ನಡೆಪ್ಪಾ! ನಮ್ಮೂರೆಲ್ಲಾ ಸಿಂಗಾರ ಮಾಡೋನು. (ಬರ್ಮಣ್ಣನು ಮುಂದೆ ನಡೆಯುವನು ಬೀರಣ್ಣನು ನಡೆಯುತ್ತಿದ್ದವನು ಗಕ್ಕನೆ ನಿಂತು ಏನೋ ಯೋಚಿಸುತ್ತಾ ಸುತ್ತಮುತ್ತು ನೋಡಿ) ಯಲ ಯೆಲ್ಲಿಗೋದ್ನೋಯಿವನು.

[ದೂರದಲ್ಲಿ ಹೋಗುವ ಬರ್ಮಣ್ಣನನ್ನು ನೋಡಿ] ಬರ್ಮಣ್ಣಾ! ಏ ಬರ್ಮಣ್ಣಾ! ಬಾರೋ ನಿನ್ಮಂಜಳಾಗ.

ಬರ್ಮ : (ಬಂದು) ಯಾಕೆಲೆ ಅಂಗಟ್ಲ ಅರಕೊಂತಿ.

ಬೀರ : ಯೇನಿಲ್ಲ ನಂಗೊಂದು ಮನಸಿನಾಗೆ ಅನುಮಾನಾಗೈತೆ ನೋಡೋ.

ಬರ್ಮ : ಇರ್ಲಿಬಾರೋ ಯಾತ್ರನುಮಾನ ಜಲ್ದಿ ವೋಗಾನ.

ಬೀರ : ಅಂಗಲ್ಲೋ ತಟೂಕು ತಡಿ. ಅಲ್ಲ ಬೀರಪ್ಪದೇವ್ರ್ನ ಕುರಿ ಬಲಿ ಕೊಡ್ಬಾರ್ದು ಪಾಪ ಅಂತ ಯೇಳಿದ್ನಲ್ಲ ನಮ್ದೊರೆ.

ಬರ್ಮ : ಔದು.

ಬೀರ : ಮತ್ತೆ ಈವೊತ್ತು ನಮ್ದೊರೆ ಇಷ್ಟುಮಂದೀನ ಯಿದ್ದದಾಗೆ ಸಾಯಬಡದ್ನಲ್ಲಾ ಯಿದೆಂಗೇಂತ ಪರಸ್ನೆ.

ಬರ್ಮ : ಯಂಗೇನು ಬಂತೋ ದೊರೆಗ್ಳು ಯಿದ್ದದಾಗ ಸಾಯ್ಬಡ್ಯೋದು ಆಶಾರ.

ಬೀರ : ಅಂಗಾದ್ರೆ ಕುರಿಗಳ್ನ ದೇವ್ರುಗೆ ಬಲಿಕೊಡೋದು ಕುರುಬರ ಆಶಾರಪ್ಪ ಬ್ಯಾಡಂಬೋದ್ಯಾಕಪ್ಪ.

ಬರ್ಮ : ವುಡುಗನಾದ್ರು ಸಿಂತಿಲ್ಲ ಬಿಡೋ ಬೀರ! ಒಳ್ಳೇ ಪೀಕಲಾಟದ ಪರಸ್ನೇನೆ ಒಗದೆ.... ಆ.... ಯಿಲ್ಲಿ ಕೇಳು... ಯಿದ್ದಮಾಡೋದು ಯಾಕಾಂದ್ರೆ

ಬೀರ : ಮಂದೀನ ಸಾಯ್ಬಡೋಕೆ.

ಬರ್ಮ : ಸಾಯ್ಬಡೋದೇ ಅಲ್ಲೋ.

ಬೀರ : ಊ ಸತ್ತೋರ್ನ ಬದುಕಿಸ್ತಾರೇನು.

ಬರ್ಮ : ಸತ್ತೋರ್ನ ಯಂಗ್ಬದುಕಿಸ್ತಾರೋ ನೀನ್ಮಾತಾಡೋದೆಲ್ಲಾ ಯಿಂಗೇ ನೋಡ.

ಬೀರ : ವೋಗ್ಲಿಬಿಡಪ್ಪ ಯಿದ್ದವಾಡಿ ಮಂದಿನ ಕೊಲ್ದ್ರೆ ಪಾಪಾಲ್ಲೇನು.

ಬರ್ಮ : ಅಲ್ಲ.

ಬೀರ : ನೀನೊಳ್ಳೆ ತಂಗೇಳ್ತಿ ಬಿಡಾ! ಅಲ್ಲಾ ಮನಿಶ್ಯಾ ಕುರೀನ್ಕೊಂದ್ರೆ ಪಾಪಾಂತ ಅಂದ್ಮೇಲೆ ಮನಿಸ ತನ್ನಂತ ಮನಿಸ್ಯಾನ್ನ ಕೊಂದ್ರೆ ಪಾಪಲ್ಲೇನ.

ಬರ್ಮ : ಅಂಗಲ್ಲಲ್ಲೇೀ....

ಬೀರ : ಇನ್ನೆಂಗಾಮತ್ತೆ?

ಬರ್ಮ : ಇಲ್ಕೇಳು ದೊರೆ ಆದೋನು ಒಳ್ಳೇದು ಕೆಟ್ಟು ಯಿಶಾರ ಮಾಡ್ಬೇಕಲ್ಲ.

ಬೀರ : ಮಾಡ್ಬೇಕು ಅಂದ್ರೆ ಮನಿಸ್ಯಾರ್ನ ಸಾಯಬಡಿಯೋದ್ಯಾತರದೋ

ಬರ್ಮ : ಎಂತಾ ದಡ್ಡನೋ ನೀನು. ರಾರ್ನಂದ್ರವರ್ನೆ ಯಂಗಕೊಲ್ತಾರೆಲೆ ದೊರೆಗಳಾದೋರು ಕೆಟ್ಟಾವ್ರ್ನ, ಚಾಡಿ ಯೇಳೋರ್ನ, ಲಂಚಾ ತಿಂಬೋರ್ನ, ಕೂನಿ ಮಾಡೋರ್ನ, ಮಂದಿನ ಪೀಡ್ಸೋರ್ನ, ಇಂತವ್ರನ್ನೆಲ್ಲಾ ಕೊಲ್ಲಿ ಒಳ್ಳೇರ್ನ ಬುದ್ಧಿವಂತರ್ನ ಪರಪಂಚಕ್ಕೆ ಉಪಕಾರ ಮಾಡೋರ್ನ, ಯಿಂತೋರ್ನೆಲ್ಲಾ ತಣ್ಣಗೆ ನೋಡಿಕೊಂಡು ಬರ್ತಾರೆ. ಇದು ಯೀಗಿಂದೇನಲ್ಲ ಮೊದಲ್ನಿಂದ ಬಂದದ್ದೆ.

ಬೀರ : ಅದೆಲ್ಲ ಅಂಗಿರ್ಲಿ ಯೀಗ ನೀನೇ ಕೆಟ್ಟೋನೂಂತ ನಂಗೆ ಸಿಟ್ಟಂದ್ಬಿಟ್ಟು ನಿನ್ನ ಸಾಯ್ಬಡ್ದ್ರೆ ದೊರೆ ಸುಮ್ಕಿರ್ತಾನೇನು?

ಬರ್ಮ : ಔದೆಲೆ ವುಡುಗಾ! ಕಡೆಗೆ ನನ್ಮೇಲೆ ಬಂದ್ಯಾ?

ಬೀರ : ಅಂಗಲ್ಲೋ ಬರ್ಮಪ್ಪ! ಯೇನೋ ಯಿಶಾಳ್ಯದಾಗ ಅಂಗಾದ್ರೆ ಯಂಗಾಂದೆ

ಬರ್ಮ : ನನ್ಕೊಲ್ಲಿದ್ರೆ ದೊರೆ ಸುಮ್ನೆ ಬಿಡತಾನೇನು, ಸೂಲಕ್ಕಾಕ್ತಾನೆ.

ಬೀರ : ಆ.... ಆಕ್ತಾನಲ್ಲ.... ಆದ್ರೆ ಆ ದೊರೆ ಯಿನ್ನೊಬ್ರ್ನ ಕೊಲ್ಲಿದ್ರೆ ಅವನ್ನ ಯಾರು ಶೂಲಕ್ಕಾಗ್ತಾರೆ?

ಬರ್ಮ : ಯಾರು ಯಾಕಾಕ್ತಾರೋ

ಬೀರ : ಅಂದ್ರೆ ದೊರೆಮಾಡಿದರೆ ಸಿಕ್ಸೆಯಿಲ್ಲ ನಾವು ಮಾಡ್ದ್ರೆ ಯಾಕಪ್ಪಾ ಸಿಕ್ಸೆ.

ಬರ್ಮ : ನಿಂಗೇನೂ ಗೊತ್ತಿಲ್ಲನೋಡ. ದೊರೆ ಅಂದ್ರೆ ಯೇನಂದ್ಕೊಂಡೋ ದೇವ್ರು ಇದ್ದಂಗೆ ಯಲ್ಲಾಗ್ರ್ಗು ತಂದೆ

| | | |
|---|---|---|
| | | ತಾಯಿ ಯಿದ್ದಾಂಗೆ. ಮಕ್ಕಳು ಮಾಡೋ ತಪ್ಪು ನೋಡಿ ತಂದೆತಾಯಿಗಳೆಂಗೆ ಸಿಕ್ಸೆ ಮಾಡಿ ಬುದ್ಧಿ ಕಲಿಸ್ತಾರೋ ಅದ್ರಿಂದ ಆತಗೆ ಪಾಪಯಿಲ್ಲ, ಸಿಕ್ಸೆಯಿಲ್ಲ. |
| ಬೀರ | : | ನೀನೇಳೋದು ನನಗೆ ಸರೀಬರ್ಲಿಲ್ಲ ನೋಡು. ದೊಡ್ಡೋರು ಯೆಂಗಾದ್ರು ಮಾಡ್ಬೋದು, ಸಣ್ಣೋರು ಮಾಡಿದ್ರೆ ನೋಡು ಯೆಲ್ಲಾ ಬರೋದು. |
| ಬರ್ಮ | : | ಇರ್ಲಿ ಬಾರೋ ನೀನ್ಬಲೇ ತಿಳಿದೋನು. ಯಾತಾತ್ರುದೋ ಮಾತಾಡ್ತಿ ಸುಮ್ನೆ ವೊತ್ತುಮಾಡ್ತಿ ಬಾರನಿನ್ನ. |
| ಬೀರ | : | ಔದು ನಡೆಯೋ ಬಾಳೊತ್ತಾಯ್ತು. |
| | | [ಯೆಂದು ಸ್ವಲ್ಪ ಮುಂದೆ ನಡೆವಲ್ಲಿ ಖಿನ್ನನಾದ ಕನಕನಾಯಕನು ಬರುವುದನ್ನು ನೋಡಿ] |
| ಬರ್ಮ | : | ಯಲೆಲೆ ನಮ್ಮಣೋರೆ ಈಕಡೆ ಬರ್ತಾರಲ್ಲೋ. |
| ಬೀರ | : | ಔದು, ಯಾಕೋ ಮಕ ಸಪ್ಪಗಾಗೈತಪ್ಪ. |
| ಬರ್ಮ | : | ಏನೋಪ್ಪ. |
| | | [ಆಗ ಕನಕನಾಯಕರು ಬರಲು ಇವರು "ಜಯವಾಗಲಿ ದೊರೆಗಳಿಗೆ ಜಯವಾಗಲಿ" ಎಂದು ಜಯಕಾರ ಮಾಡುವರು ಅವರನ್ನು ತಡೆದು] |
| ಕನಕ | : | (ಬೇಸರದಿಂದ) ಜಯ ಕೊಲೆಪಾತಕಿಗೆ ಜಯ – ಸಾಕು ಈ ಜಯಸ್ವಾಗತವು ನನಗೆ ಬೇಡ. |
| ಬರ್ಮ | : | ಅದ್ಯಾಕ ದಣೋರೆ ಈಗಂತೀರಿ. |
| ಕನಕ | : | ಬರ್ಮಣ್ಣ! ಬೀರಣ್ಣಾ! ನೀವಿನ್ನು ಹೊರಡಿ. |
| ಬರ್ಮ | : | (ಆಶ್ಚರ್ಯದಿಂದ) ಎಲ್ಲಿಗೆ ದೊರೆ |
| ಕನಕ | : | ಊರಿಗೆ |
| ಬರ್ಮ | : | ನೀವು |
| ಕನಕ | : | ನಾನು ಬರಲಾರೆ |
| ಬೀರ | : | ಯಿದೇನು ದೊರೆ ನಿಮ್ಮನ್ಬಿಟ್ಟು ನಾವೋಗೋದೆ. |
| ಬರ್ಮ | : | ಯಾಕೋ ದಣೇರ ಮನಸು ಬದಲಾಗಿದ್ದಂಗೈತಿ. |

ಕನಕ : ಅಹುದು ಬರ್ಮಣ್ಣ! ನಿಜ. ಮುಂದೆ ನಿಮಗೆ ರಾಜನಾಗಿರಲಾರೆ.

ಬರ್ಮ : ಅಯ್ಯೋ ನಮ್ಮಪ್ಪಾ! ಯಿಂಗ್ಯಾಕ ನಮ್ಮನ್ನು ಕೈಬಿಡ್ತಿ ಯೀಟು ವದ್ದಾಡಿ ಯಿದ್ದದಾಗ ಗೆದ್ದು ಸಂತೋಸಾಗಿರೋದ್ಬಿಟ್ಟು ಯಿಂಗ್ಯಾಕೆ ಬ್ಯಾಸರಾಗಿ ಮಾತಾಡ್ತೀಯಪ್ಪ! ಬಾಪ್ಪ ದೊರೆ! ವೂರಿಗೆ ವೋಗೋನು.

ಕನಕ : ನೀವು ನನ್ನಲ್ಲಿರಿಸಿದ ಪ್ರೇಮಕ್ಕೆ ಚಿರಕೃತಜ್ಞನು. ಬರ್ಮಣ್ಣಾ! ಹೆಚ್ಚಿಗೆ ಹೇಳಲಾರೆ. ನನ್ನಲ್ಲಿ ನಿಮಗೆ ಈಗಲೂ ವಿಶ್ವಾಸವಿರುವುದಾದರೆ ಈಗಲೇ ಊರಿಗೆ ಹೋಗಿರಿ. ಇದಕ್ಕೆ ಮುಂಚೆ ನನ್ನಿಂದ ಕಳಿಸಲ್ಪಟ್ಟ ಶಿವಪ್ಪನಾಯಕನ ಮಗಳಿಗೆ ಪಟ್ಟವನ್ನು ಕಟ್ಟಿ ಆಕೆಯೇ ನಿಮ್ಮ ತಾಯಿಯೆಂದು ಭಾವಿಸಿ ಆಕೆಯೇ ನಿಮ್ಮ ತಾಯಿಯೆಂದು ಭಾವಿಸಿ ಆಕೆಯ ಆಜ್ಞೆಯನ್ನು ಮೀರದೆ ವರ್ತಿಸಿರಿ ಇನ್ನು ಹೊರಡಿರಿ.

ಬರ್ಮ : ಅಯ್ಯೋ ನನ್ನೊಡೆಯಾ ತಾವೆಲ್ಲಿಗೆ ವೋಗ್ತೀರಿ?

ಕನಕ : ಎಲ್ಲಿಗೆಂದು ಹೇಳಲಾರೆ. ನೀಚ ಹಿಂಸೆಯಿಂದ ಕೋಲಾಹಲವೆದ್ದ ಹೃದಯಕ್ಕೆ ಶಾಂತಿಯನ್ನು ಪಡೆಯಲು ಹೋಗುತ್ತೇನೆ. ಹೊರಗಿನ ಯುದ್ಧವು ಮುಗಿಯಿತು. ಇದೀಗ ಒಳಗಿನ ಯುದ್ಧವು ಪ್ರಾರಂಭವಾಗಿದೆ. ಅದರಲ್ಲಿ ಜಯಹೊಂದುವ ಆಸೆಯಿಂದ ಹೋಗುವೆನು.

ಬೀರ : ಅದೇನೇನೊ ದಣೇರು ಯೇಳೋದು ಒಂದೂ ತಿಳೀವಲ್ಲು.

ಕನಕ : ಅದು ಮುಂದೆ ನಿಮಗೆ ತಾನೇ ತಿಳಿಯುವುದು, ಹೋಗಿ ಬೀರಪ್ಪ ದೇವನು ಸದಾ ನಿಮ್ಮನ್ನು ಕಾಪಾಡಲಿ.

[ರೋಹಿಣಿಯು ದಾರಿಗಡ್ಡನಿಂತು]

ರೋಹಿಣಿ : (ದಿಟ್ಟತನದಿಂದ) ಅದಾಗದು. ನಿಲ್ಲಿ ನನ್ನನ್ನು ಬಿಟ್ಟು ನೀವೆಲ್ಲಿ ಹೋಗುವಿರಿ?

ಕನಕ : (ಆಶ್ಚರ್ಯದಿಂದ) ರೋಹಿಣಿ! ಬಾಡಗ್ರಾಮಕ್ಕೆ ಹೊಗದೆ ಇಲ್ಲಿಗೇಕೆ ಬಂದೆ?

ರೋಹಿಣಿ : ನೀವಿಲ್ಲದ ಆ ಹಾಳೂರಿನಲ್ಲಿ ನಾನೇನು ಮಾಡಲಿ?

ಕನಕ : ಇದೊ ಇವರೆಲ್ಲ ನಿನ್ನ ಮಕ್ಕಳು ಸುಖವಾಗಿ ಪಾಳೆಯವನ್ನು ಆಳಿಕೊಂಡಿರು.

ರೋಹಿಣಿ : ಆ ಸುಖವನ್ನೇ ತಾವು ಬಿಟ್ಟುಹೋಗುವ ಕಾರಣ?

ಕನಕ : ಆತ್ಮಶಾಂತಿಗಾಗಿ.

ರೋಹಿಣಿ : ಶಾಂತಿ! ಅನ್ಯರ ಶಾಂತಿಯನ್ನು ಕೆಣಕಿ ಹೊನ್ನು ಹೆಣ್ಣುಗಳ ಮೋಹದಿಂದ ರಾಜಕೀಯದ ನೆಪವನ್ನು ಒಡ್ಡಿ ಕೊಲೆ ಮಾಡುವವರಿಗೆ ಶಾಂತಿ ಸಾಧ್ಯವಿಲ್ಲ. ಇದು ಮೋಸ. ವಂಚನೆ. ಇರಲಿ ಇಷ್ಟೆಲ್ಲ ಯುದ್ಧಮಾಡಿದ್ದು ನನ್ನನ್ನು ಲಗ್ನವಾಗಬೇಕೆಂದಲ್ಲವೆ!

ಕನಕ : ಅಲ್ಲ. ನಿನಗಾಗಿ ಯುದ್ಧಮಾಡಲಿಲ್ಲ. ಲೋಕದ ಸ್ತ್ರೀಯರೆಲ್ಲರನ್ನು ನನ್ನ ತಾಯಿಯಂತೆ ಭಾವಿಸುವೆನೆಂದು ಶಪಥಮಾಡಿರುವೆ. ಈ ಯುದ್ಧ ನಿನಗಾಗಿಯಲ್ಲ. ನಿನ್ನ ತಂದೆಯು ನನ್ನ ಕುಲವನ್ನು ನಿಂದಿಸಿದನೆಂಬ ಆಗ್ರಹದ ಅಹಂಕಾರವೇ ಈ ಯುದ್ಧಕ್ಕೆ ಕಾರಣವಾಗಿ ಅವಿವೇಕದಿಂದ ಇಷ್ಟೆಲ್ಲ ಅನರ್ಥವಾಯಿತು. ಆದ್ದರಿಂದ ಈ ನನ್ನ ಅಹಂಕಾರಕ್ಕೆ ಪ್ರೇರಿತವಾದ ಈ ರಾಜ್ಯ ಬಿಟ್ಟುಹೋಗುವೆನು. ನಿನಗೆ ಅಪರಾಧಗೈದ ಪ್ರಾಯಶ್ಚಿತ್ತಕ್ಕಾಗಿ ಆ ರಾಜ್ಯವನ್ನು ನಿನಗೆ ಧಾರೆ ಎರೆದು ಹೋಗುವೆನು.

ರೋಹಿಣಿ : ಅದರಿಂದ ನನಗಾಗುವ ಲಾಭವೇನು? (ಗದ್ಗದದಿಂದ ಕಣ್ಣೀರಿಟ್ಟು) ತಾಯಿಯಿಲ್ಲದ ತಬ್ಬಲಿಯಾಗಿ ತಂದೆಯ ನೆರಳಿನಲ್ಲಿ ಬಾಳುತ್ತಿದ್ದ ನನಗೆ ಆ ತಂದೆಯನ್ನು ಇಲ್ಲದಂತೆ....

ಕನಕ : ತಂಗೀ! ಮಾನವರಿಗೆ ಕೊಲ್ಲುವ ಶಕ್ತಿಯನ್ನು ನೀಡಿದ ದೇವರು ಬದುಕಿಸುವ ಶಕ್ತಿಯನ್ನು ಕೊಡಲಿಲ್ಲ, ಬಲ್ಲೆ. ತಂದೆ ತಾಯಿಗಳನ್ನು ಕಳೆದುಕೊಂಡ ನಿನ್ನ ದುಃಖವೆಷ್ಟೆಂಬುದನ್ನು ನಿನ್ನಂತೆಯೇ ತಬ್ಬಲಿಯಾದ ನಾನು ಬಲ್ಲೆ. ಆದರೆ ನಾನೇನು ಮಾಡಲಿ. ಶಾಂತಿಯಿಲ್ಲದ ನಾನು ನಿನಗೆಂತು ಶಾಂತಿನೀಡಲಿ ಉಪಾಯವಿಲ್ಲ.

ರೋಹಿಣಿ : ಇದೆ. ಆ ಶಾಂತಿಯು ನಮ್ಮಿಬ್ಬರ ವಿವಾಹದಿಂದ ಸುಲಭವಾಗಿ ಲಭಿಸುವದು.

ಕನಕ : (ವಿಷಾದದ ನಗೆಯಿಂದ) ಇಲ್ಲ ಎಂದೆಂದಿಗೂ ಅದು ಸಾಧ್ಯವಿಲ್ಲ.

ರೋಹಿಣಿ : ಸಾಧ್ಯವಿಲ್ಲ! ಹಾಗಾದರೆ ನನ್ನ ಗತಿ?

ಕನಕ : ನಿನಗಿಷ್ಟಬಂದವರೊಡನೆ ವಿವಾಹವಾಗಿ ನನ್ನ ಪಾಳಯದ ರಾಣಿಯಾಗಿ....

ರೋಹಿಣಿ : (ಸಿಟ್ಟಿನಿಂದ) ಸಾಕು ನಿಲ್ಲಿಸಿ. ಇಷ್ಟೆಲ್ಲಾ ಹಗರಣಕ್ಕೆ ಗುರಿಯಾದ ನನ್ನನ್ನು ಅಕ್ಕರೆಯಿಂದ ಯಾರು ವರಿಸುವರು ನಿರಪರಾಧಿಯಾದ ಹೆಣ್ಣಿಗೆ ಇಲ್ಲದ ಕಲಂಕವನ್ನು ಹೊರಿಸಿ ಬೆಡಗಿನ ಮಾತಿನಿಂದ ಜಾರಿಕೊಳ್ಳುವ ನಿಮ್ಮ ಅಸಭ್ಯ ವರ್ತನೆಯನ್ನು ನಾನೆಂದಿಗೂ ಸಹಿಸಲಾರೆ. ನೀವು ನನ್ನನ್ನು ವರಿಸಿಯೇ ತೀರಬೇಕು.

ಕನಕ : ಹೆಣ್ಣಿಗೆ ಯೋಗ್ಯವಲ್ಲದ ಈ ಉದ್ಧಟತನವನ್ನು ಬೆಳೆಸಿಕೊಳ್ಳಬೇಡ ತಂಗೀ! ನಾನು ಶಪಥಕ್ಕೆ ಒಳಗಾಗಿರುವೆ.

ರೋಹಿಣಿ : (ವ್ಯಂಗ್ಯವಾಗಿ) ಶಪಥ! ಆಹಾ ಇದೆಂತಹ ಶಪಥ, ಅಲ್ಲ ಹೆಣ್ಣಿನ ಕೊರಳನ್ನು ಕೊಯ್ಯುವ ಕುಪಥ. ಬುದ್ಧಿ ಇಲ್ಲದ ಭೀಷ್ಮ ಇಂತಹ ಶಪಥದಿಂದಲೇ ದಾಯಾದಿ ಕಲಹಕ್ಕೆ ಕಾರಣನಾಗಿ ಭಾರತ ವಿನಾಶಕ್ಕೆ ಮೂಲವಾದ.

ಕನಕ : ರೋಹಿಣಿ! ಸಂತಾಪದಿಂದ ತಪ್ತಳಾದ ನಿನಗೇನೂ ಹೇಳಲಾರೆ ದಯಮಾಡಿ ಕ್ಷಮಿಸು. ಬೀರಣ್ಣಾ, ಬರ್ಮಣ್ಣಾ ದೈವಯತ್ನವಿದ್ದಂತಾಗಲಿ. ವಿಜಯನಗರ ಸಾಮ್ರಾಟರಿಗೆ ಎಲ್ಲವನ್ನು ಬಿನ್ನಪಮಾಡಿರಿ. ಅವರ ಆಜ್ಞೆಯಂತೆ ವರ್ತಿಸಿರಿ. ಎಷ್ಟು ಜನ್ಮಗಳು ಕಳೆದರೂ ಎಂದಾದರೊಂದು ದಿನ ಇಂತಹ ಬಂಧನಗಳನ್ನು ಹರಿದೊಗೆಯುವ ಸಂಧಿಯೂ ಒಂದಲ್ಲದೊಂದು ರೀತಿಯಿಂದ ಎಲ್ಲರಿಗೂ ಬಂದೇ ತೀರುವುದು. ಆ ಸುಸಂಧಿಯು ನನಗಾಗಿ ಇಂದು ಒಲಿದು ಬಂದಿದೆ. ಯಾವ ಮೋಹವು ನನ್ನನ್ನು ಇಂದು ಬಂಧಿಸಲಾರದು.

[ಎಂದು ಹೋಗುತ್ತಿರುವಲ್ಲಿ ಅಡ್ಡನಿಂತು]

ರೋಹಿಣಿ : ಇದು ನಿಮ್ಮ ಕೊನೆಯ ನಿರ್ಧಾರವೇ?

ಕನಕ : ಅಹುದು.

ರೋಹಿಣಿ : ಹಾಗಾದರೆ ನೆನಪಿನಲ್ಲಿಡಿ ನಿಷ್ಕಳಂಕವಾದ ಹೆಣ್ಣಿನ ಎದೆಯನ್ನು ಮೆಟ್ಟಿಸಾಗುವ ನಿಮ್ಮ ಮಾರ್ಗವು ನಿಷ್ಕಂಟಕವಲ್ಲವೆಂಬುದನ್ನು ಮರೆಯಬೇಡಿ. ನೀವೆಲ್ಲಿದ್ದರೂ ಯಾವ ರೀತಿಯಲ್ಲಿದ್ದರೂ ಒಂದು ದಿನ ನಿಮ್ಮ ಶಪಥದ ತೆರೆಯನ್ನು ಹರಿದು ಹೆಣ್ಣಿನ ಹಿರಿಮೆಯನ್ನು ಮೆರೆವ ಈ ರೋಹಿಣಿಗೆ ತಲೆ ಬಾಗಲೇಬೇಕೆಂಬ ನನ್ನ ಶಪಥವನ್ನು ಲಕ್ಷದಲ್ಲಿಡಿ.

[ಎಂದು ಬಿರುನೋಟದಿಂದ ವೇಗವಾಗಿ ಹೋಗುವಳು]

ಕನಕ : (ದಿಗ್ಭ್ರಮೆಗೊಂಡು) ಈಶ್ವರೇಚ್ಛೆ

[ಬರ್ಮಣ್ಣ, ಬೀರಣ್ಣ ಈ ಘಟನೆಯಿಂದ ದುಃಖಿತರಾಗಿ ತಮ್ಮ ನಾಯಕನಿಗೆ ವಂದಿಸಿ ಮೆಲ್ಲನೆ ಹಿಂದೆ ಹಿಂದೆ ಸರಿದು ಹೋಗುವರು. ಕನಕನು ವಿಷಾದದಿಂದ ಹೊರಡುವನು.]

[ತೆರೆ]

ಎರಡನೇ ಅಂಕ

ಒಂದನೇ ನೋಟ

## – ತುಂಗಭದ್ರಾ ತೀರ –

[ಕನಕನಾಯಕನು ಮಾಸಿದ ವಸ್ತ್ರಗಳಿಂದಲೂ ಬೆಳೆದ ಗಡ್ಡದಿಂದಲೂ ಆಕಡೆ ಈಕಡೆ ಅಡ್ಡಾಡುತ್ತಿರುವನು.

[ಅನುಬಂಧ ೧೦]

ಒಬ್ಬ ಜಂಗಮ ಹಾಡುತ್ತಾ ಹೋಗುವನು.]

[ಅನುಬಂಧ ೧೧]

ಕನಕ : ಏನು ಮಧುರವಾದ ಹಾಡು. ಆ ಹಾಡಿನಲ್ಲಿ ಶಾಂತಿಯು ತುಂಬಿ ತುಳುಕುತ್ತಿದೆ. ಆ ಅಂಬಿಗರಿಗಿದ್ದ ಶಾಂತಿಯು ನನಗಿಲ್ಲವಲ್ಲ. ಒಂದುಕಡೆ ಪ್ರಜಾಹಿತಕ್ಕಾಗಿ ರಾಜ್ಯಭಾರವನ್ನು ವಹಿಸುವ ಆಸೆ. ಮತ್ತೊಂದುಕಡೆ ದುಃಖಮಿಶ್ರವಿಲ್ಲದ ಅಖಂಡಾನಂದವನ್ನು ಹೊಂದುವ ಆಸೆ. ಒಂದು ಕಡೆ ಪೌರುಷ ಧರ್ಮವನ್ನು ಬಿಡಲಾರದ ಬಳಲಿಕೆ. ನಾನಾಪರಿಯಿಂದ ನನ್ನ ಮನಸ್ಸು ಅದೆಲ್ಲಿಗೋ ನನಗೆ ತಿಳಿಯದೆ ಸಂಚರಿಸುತ್ತಿದೆ. ಯೇನು ಮಾಡಲಿ. ಹೃದಯದ ಶಾಂತಿಗಾಗಿ ಅದೆಷ್ಟು ಪ್ರಯತ್ನಪಟ್ಟರೂ ವ್ಯರ್ಥವಾಗುವದಲ್ಲ.

[ದೂರದಲ್ಲಿ ವೇದಪಾಠವು ಕೇಳಿಬರುವದು. ಕನಕನು ತಿರುಗಿ ನೋಡಲು ಶಿಷ್ಯರ ಸಹಿತ ವ್ಯಾಸರಾಯರು ಬರುವರು. ಕನಕನು ಒಮ್ಮೆಲೇ ಹೋಗಿ ವ್ಯಾಸರಾಯರ ಕಾಲಿಗೆರಗುವನು]

[ಅನುಬಂಧ 12]

ಕನಕ : ಸಿಕ್ಕಿದ ನನ್ನ ಕನಸಿನ ದೇವರು ಸಿಕ್ಕಿದ. ನಾನೇ ಧನ್ಯ ಸ್ವಾಮಿ! ಭಕ್ತನನ್ನು ಉದ್ಧಾರಮಾಡು, ಮಹಾತ್ಮ! ಶಾಂತಿಗಾಗಿ ಹಂಬಲಿಸುವ ಈ ಪಾಪಿಗೆ ಉಪದೇಶ ಮಾಡಬೇಕು.

[ವ್ಯಾಸರಾಯರು ಮಂದಹಾಸದಿಂದ ಶಿಷ್ಯರ ಕಡೆ ನೋಡುವರು]

ಶಿಷ್ಯ : ನೀನು ಯಾವ ಜಾತಿಯವನು?

ಕನಕ : ಸ್ವಾಮಿ! ನಾನು ಕುರುಬ, ಉಪದೇಶ ಮಾಡಬೇಕು.

ಶಿಷ್ಯ : ಓಹೋ! ಕುರುಬನಿಗೆ ಉಪದೇಶವೇ?

ಕನಕ : ಅಹುದು ದಾಸನನ್ನು ಉದ್ಧಾರ ಮಾಡಬೇಕು.

ಶಿಷ್ಯ : ಸರೆ, ಇಲ್ಲೇಕೂತು ಕೋಣನಮಂತ್ರ ಜಪಮಾಡು.

ಕನಕ : ಧನ್ಯನಾದೆ (ಹೋಗುವರು).

[ಕೋಣನ ಮಂತ್ರ ಜಪಮಾಡುತ್ತ ಕೂಡ್ರವನು. ಆಗ ವಿಷ್ಣುವು ಲಕ್ಷ್ಮಿಯು ಹಿಂದುಗಡೆಯಿಂದ ಆಶೀರ್ವದಿಸುವರು. ಓಂ ಓಂ ಓಂ ಎಂಬ ಶಬ್ದವಾಗುವುದು ಕನಕನು ಕಣ್ಣು ತೆರೆದು ನೋಡುವನು. ವ್ಯಾಸರಾಯರು ಕಾಣಿಸುವರು. ಬಾ ಬಾ ಎಂದು ಕನಕನನ್ನು ಕರೆಯುವರು. ಕನಕನು ಆನಂದದಿಂದ ಹಾಡುತ್ತಾ, ಕುಣಿಯುತ್ತ ಹೋಗುವನು.]

[ತೆರೆ]

ಎರಡನೇ ಅಂಕ ಎರಡನೇ ನೋಟ

## ಪ್ರಾತಃಕಾಲ

– ಬೀದಿ –

[ವ್ಯಾಸರಾಯರ ಮಠದ ಪಂಡಿತರು – ಭೀಮಾಚಾರ್ಯರು ಬರುವರು. ಆ ಮೇಲೆ ಗೋವಿಂದಾಚಾರ್ಯರು ಬರುವರು]

ಭೀಮಾ : ಅನ್ಯಾಯ ಅನ್ಯಾಯ ತೀರಾ ಅನ್ಯಾಯ. ಒಬ್ಬ ಕುರುಬ ಕುರಿ ಕಾಯುವ ಕುರುಬ, ಕಂಬಳಿಹೊದ್ದು ತಿರುಗುವ ಕಗ್ಗ ಕುರುಬ ಅಯ್ಯಯ್ಯೋ ಅವನಿಗೆ ಇಂಥಾ ಪದವಿಯೇ. ಏನು ಕಾಲದ ಮಹಿಮೆ. ಎಂತಹ ಮರುಳು ಮಾಡಿದೆಯಲ್ಲೋ ಕುರುಬಾ.... ಕುರುಬಾ....

ಗೋವಿ : (ಬಂದು) ನಮಸ್ಕಾರ ಭೀಮಾಚಾರ್ರೆ ನಮಸ್ಕಾರ.

ಭೀಮಾ : (ನೋಡಿ) ನಮಸ್ಕಾರ ನಮಸ್ಕಾರ ಬನ್ನಿ ಬನ್ನಿ.

ಗೋವಿ : (ನಕ್ಕು) ಅಲ್ರಿ ಆಚಾರ್ರೆ! ಇದು ಎಂದಿನಿಂದ ಅಭ್ಯಾಸ ಮಾಡಿದಿರಿ?

ಭೀಮಾ : ಏನದು?

ಗೋವಿ : ಕುರುಬ ಮಂತ್ರ.

ಭೀಮಾ : ಆ ತಲೆತಿರುಕ ಕುರುಬ ಕನಕನು ನಮ್ಮ ವ್ಯಾಸರಾಯರ ಮಠಕ್ಕೆ ಬಂದಂದಿನಿಂದ ದೇವರ ಮಂತ್ರ ಮರೆತು ಸದಾಚಾರ ಸಂಪನ್ನ ಬ್ರಾಹ್ಮಣರೆಲ್ಲ ಕುರುಬಮಂತ್ರ ಪಠಿಸಬೇಕಾಗಿದೆ.

ಗೋವಿ : ಇದೇನು ನಿಮ್ಮಂಥ ಘನವೇದಾಧ್ಯಯನ ಪಂಡಿತರು ಹೀಗೆ ಹೇಳಬಹುದೆ?

ಭೀಮಾ : ಕುರುಬನು ಸದ್ಬ್ರಾಹ್ಮಣನಾದ ಮೇಲೆ ಎಲ್ಲಿದೆಯಯ್ಯಾ ವೇದಾಧ್ಯಯನ.

ಗೋವಿ : ಕುರುಬನು ಬ್ರಾಹ್ಮಣನಾಗುವದೆಂದರೇನಯ್ಯ?

ಭೀಮಾ : ಏತಕ್ಕಾಗಬಾರದು. ಅದೇ ಕನಕ ಈಗ ನಮ್ಮೆಲ್ಲರಿಗಿಂತಲು ದೊಡ್ಡವನಾಗಿದ್ದಾನೋ ಇಲ್ಲವೋ?

ಗೋವಿ : ಇದು ಬ್ರಾಹ್ಮಣರಿಗೆಲ್ಲಾ ಅವಮಾನ.

ಭೀಮಾ : ಯಾರು ಕೇಳಬೇಕಯ್ಯ ನಿನ್ನ ಅವಮಾನ. ಸ್ವಾಮಿಗಳೆ ಅವರನ್ನು ಅಷ್ಟು ಪ್ರೀತಿಯಿಂದ ಆದರಿಸುವಾಗ.

ಗೋವಿ : ನಿಜ ನಿಜ. ನಾವೆಷ್ಟು ದಿವಸ ಶಿಷ್ಯರಾಗಿದ್ದರೂ ಸ್ವಾಮಿಗಳಿಂದ ಆ ಕುರುಬನಿಗೆ ದೊರೆಯುವ ಗೌರವವಾದರೂ ನಮಗಿಲ್ಲ.

ಭೀಮಾ : ಅಹುದು. ಮುಂದೆಬಂದ ಕಿವಿಗಿಂತಲು ಹಿಂದೆಬಂದ ಕೋಡಿನ ಪ್ರಭಾವವೇ ಹೆಚ್ಚಿನದಲ್ಲವೆ.

[ಒಬ್ಬ ಬ್ರಾಹ್ಮಣನು ಜಾಗಟ ಬಾರಿಸುತ್ತ ಡಂಗುರ ಸಾರುತ್ತ ಬರುವನು]

ಡಂಗುರ : ಕೇಳ್ರಿ ಯಲ್ಲಾರು ಕೇಳ್ರಿ, ಈ ದಿವ್ಸ ಏಕಾದಸಿ ಸ್ವಾಮಿಗಳು ಮಠದ ಬ್ರಾಹ್ಮಣರಿಗೆಲ್ಲ ಬಾಳೆಹಣ್ಣು ಹಂಚುತ್ತಾರೆ. ಆ ಹಣ್ಣು ಯಾರೂ ಇಲ್ಲದ ಜಾಗಾ ನೋಡಿ ತಿಂದು ಬರಬೇಕು. ಹೀಗಂತ ಸ್ವಾಮಿಗಳು ಅಪ್ಣೆ ಮಾಡಿದ್ದಾರೆ. ಯಲ್ರು ಬರಬೇಕಪ್ಪಾ ಬರಬೇಕು.

[ಎಂದು ಹೇಳುತ್ತ ಜಾಗಟ ಬಾರಿಸುತ್ತ ಹೋಗುವನು]

ಗೋವಿ : ಆಚಾರ್ರೆ! ಇದೇನು ಹೊಸ ಪದ್ಧತಿ? ಏಕಾದಶಿಯ ದಿನ ಹಣ್ಣು ತಿನ್ನುವುದು ಎಲ್ಲಿಂದ ಬಂತು.

ಭೀಮಾ : ಅಹುದು, ಯಾರೂ ಇಲ್ಲದ ಸ್ಥಳದಲ್ಲಿ ತಿಂದು ಬರಬೇಕಂತೆ.

ಗೋವಿ : ಹದಿನೈದಾಣೆ ಭಾಗ ಯಾರೂ ಇಲ್ಲದ ಸ್ಥಳಾನೇ ಇದೆ. ಇನ್ನು ಹಣ್ಣು ತಿನ್ನುವಾಗ ನೋಡುವವರು ಯಾರು?

ಭೀಮಾ : ವಿಚಿತ್ರ, ಕುರುಬ ನಮ್ಮ ಮಠ ಸೇರಿದಂದಿನಿಂದ ಹೊಸ ಹೊಸ ಪದ್ಧತಿಗಳು ಹೊರಡುತ್ತಿವೆ. ಬನ್ನಿ ಹೋಗುವ.

[ಎಂದು ಹೋಗುವರು]

ಎರಡನೇ ಅಂಕ ಮೂರನೇ ನೋಟ

## – ವ್ಯಾಸರಾಯರ ಮಠ –

[ವೇದಾಧ್ಯಯನವು ಜರುಗುತ್ತಿರುವುದು, ಸ್ವಾಮಿಗಳು ಪೀಠದಲ್ಲಿ ಆಸೀನರಾಗಿರುವರು, ತರುವಾಯ ಭೀಮಾಚಾರ್ಯರು, ಗೋವಿಂದಾಚಾರ್ಯರು ರಾಮಾಚಾರ್ಯರು, ಶ್ಯಾಮಾಚಾರ್ಯರು, ಗುಂಡಾಚಾರ್ಯರು ಬರುವರು]

ವ್ಯಾಸರಾಯರು : (ಕಿರುನಗೆಯಿಂದ) ಅಪ್ಪಣೆಯಂತೆ ಹಣ್ಣು ಭುಂಜಿಸಿದ್ದಾಯಿತೋ?

ಗೋವಿ : ಮಹಾಸ್ವಾಮಿಗಳ ಅಪ್ಪಣೆ ಮೀರುವುದುಂಟೆ.

ವ್ಯಾಸ : ಸರಿ, ಯಾರಿಲ್ಲದ ಸ್ಥಳದಲ್ಲಿಯೇ ಭುಂಜಿಸಿರಬೇಕು.

ಗೋವಿ : ಅಹುದು, ನನ್ನವಳು ನೀರಿಗೆ ಹೋದದ್ದು ನೋಡಿ ಯಾರಿಲ್ಲದ ಅಡಿಗೆಯ ಮನೆಯಲ್ಲಿ ಕುಳಿತು ತಿಂದುಬಿಟ್ಟೆ ಮಹಾಸ್ವಾಮಿ!

ವ್ಯಾಸ : ಸರಿ, (ಭೀಮಾಚಾರ್ಯರನ್ನು ನೋಡಿ) ನೀವು?

ಭೀಮಾ : ನಾನಂತು ಬಹಳ ರಹಸ್ಯವಾದ ಸ್ಥಳದಲ್ಲಿ ಆ ಹಣ್ಣು ಭುಂಜಿಸಿದೆ.

ವ್ಯಾಸ : ಓಹೋ ಹಾಗೋ ಅಂಥ ರಹಸ್ಯವಾದ ಸ್ಥಳವಾವುದು?

ಭೀಮಾ : ನದಿಯ ತೀರದಲ್ಲಿ ಮುಳುಗಿ ನುಂಗಿಬಿಟ್ಟೆ,

ವ್ಯಾಸ : ಚೆನ್ನಾಗಿದೆ (ಶ್ಯಾಮರಾಯರ ಕಡೆ ನೋಡಿ) ನೀವು?

ಶ್ಯಾಮ : ಊರ ಹೊರಗಿರುವ ಹಾಳುಬಿದ್ದ ಹನುಮಪ್ಪನ ಗುಡಿಯಲ್ಲಿ ಯಾರೂ ಇರಲಿಲ್ಲ, ಅಲ್ಲೇ ತಿಂದುಬಿಟ್ಟೆ,

ವ್ಯಾಸ : ಹೋ (ರಾಮಾಚಾರ್ಯರನ್ನು ನೋಡಿ) ನೀವು

ರಾಮಾ : ಸ್ವಾಮಿ! ಇವರೆಲ್ಲರಿಗಿಂತ ಗುಪ್ತವಾದ ಸ್ಥಳದಲ್ಲಿ....

ವ್ಯಾಸ : (ನಕ್ಕು) ಹಾಗಾದರೆ ಯಾರೂ ನೋಡಿರಲಿಕ್ಕಿಲ್ಲ.

ರಾಮಾ : ಉಂಟೇ ಮಹಾಸ್ವಾಮಿ! ಇವರೆಲ್ಲ ಅಲ್ಲಿಗೆ ಇಲ್ಲಿಗೆ ಹೋಗಿದ್ದಾರೆ. ನಾನು ಎಲ್ಲಿಗೂ ಹೋಗಲಿಲ್ಲ.

ವ್ಯಾಸ : ಹಾಗಾದರೆ ನೀನು ಹಣ್ಣು ತಿಂದದ್ದು ಹೇಗೆ?

ರಾಮಾ : ಮೈತುಂಬ ವಸ್ತ್ರವನ್ನು ಹೊದ್ದು ರಹಸ್ಯವಾಗಿ ತಿಂದೆ ಮಹಾಸ್ವಾಮಿ!

ವ್ಯಾಸ : ಇದು ತುಂಬಾ ಬುದ್ಧಿವಂತಿಕೆ. ಗುಂಡಾಚಾರ್ರೇ ನೀವು.

ಗುಂಡಾ : ಪಾದಾನುಗ್ರಹದಿಂದ ಬಹು ಸುಲಭವಾಯಿತು.

ವ್ಯಾಸ : (ನಕ್ಕು) ಅದು ಹೇಗೆ ಗುಂಡಾ!

ಗುಂಡಾ : ಬಿಗಿಯಾಗಿ ಕಣ್ಣು ಮುಚ್ಚಿದೆ. ಯಾರೂ ನನಗೆ ಕಾಣಲಿಲ್ಲ. ಆಗ ನಿರಾಯಾಸವಾಗಿ ಹಣ್ಣು ತಿಂದುಬಿಟ್ಟೆ ಮಹಾಸ್ವಾಮಿ!

ಭೀಮಾ : ಅಲ್ಲಯ್ಯ! ನಿನಗೆ ಯಾರೂ ಕಾಣಿಸದಿದ್ದರೂ ನೀನಾದರೂ ಅವರಿಗೆ ಕಾಣಿಸುತ್ತಿದ್ದೆಯಲ್ಲ.

ಗುಂಡಾ : ಉಂಟೆ. ನನಗೆ ಯಾರೂ ಕಾಣದ ಮೇಲೆ ನಾನಾದರೂ ಇನ್ನೊಬ್ಬರಿಗೆ ಕಾಣುವುದುಂಟೆ. ಇದು ತೀರ ದಡ್ಡತನ. (ಎಲ್ಲರೂ ನಗುವರು)

ವ್ಯಾಸ : ನೀವೆಲ್ಲರು ಹಣ್ಣು ಭುಂಜಿಸುವಲ್ಲಿ ತುಂಬಾ ಬುದ್ಧಿವಂತಿಕೆಯನ್ನು ಉಪಯೋಗಿಸಿದ್ದೀರಿ. ಆದರೆ ಕನಕನಿಗೆ ಹಣ್ಣನ್ನು ಕೊಟ್ಟಿರಾ?

ಭೀಮಾ : ಆಜ್ಞೆಯಂತೆ ಕೊಟ್ಟಿದ್ದೇನೆ.

ವ್ಯಾಸ : ಅವನು ಇನ್ನು ಏತಕ್ಕೆ ಬರಲಿಲ್ಲ?

[ಕನಕನು ಹಾಡುತ್ತಾ ಬಂದು ಸ್ವಾಮಿಗಳಿಗೆ ವಂದಿಸುವನು. ಸ್ವಾಮಿಗಳು ಆಶೀರ್ವದಿಸುವರು]

ವ್ಯಾಸ : ಕನಕಾ! ಹಣ್ಣು ಭುಂಜಿಸಿದೆಯೇನಪ್ಪಾ!

ಕನಕ : ಇಲ್ಲ.

ವ್ಯಾಸ : ಏತಕ್ಕೆ.

ಕನಕ : ರಹಸ್ಯವಾದ ಸ್ಥಳ ದೊರೆಯದಿದ್ದುದಕ್ಕಾಗಿ.

ವ್ಯಾಸ : ಏನು. ಇವರೆಲ್ಲರಿಗೂ ದೊರೆತ ಗುಪ್ತಸ್ಥಳವು ನಿನಗೆ ದೊರೆಯಲಿಲ್ಲವೇನು?

ಕನಕ : ಇಲ್ಲ ಮಹಾಸ್ವಾಮಿ! ಅವರ ಭಾಗ್ಯ ಈ ಕುರುಬನಿಗೆ ಹೇಗೆ ಬರಬೇಕು. ಎಲ್ಲಿ ನೋಡಿದರೂ ತಮ್ಮ ರೂಪವೇ ನನಗೆ ಕಾಣಬಂದದ್ದರಿಂದ ಭುಂಜಿಸದೆ ಹಿಂದಿರುಗಿ ಬಂದೆ (ಎಂದು ಹಣ್ಣನ್ನು ಪಾದದಲ್ಲಿಡುವನು.)

[ಬ್ರಾಹ್ಮಣರು ಒಬ್ಬರ ಮುಖವನ್ನು ಒಬ್ಬರು ನೋಡಿಕೊಳ್ಳುವರು]

ವ್ಯಾಸ : (ಸಂತೋಷದಿಂದ) ಕುರುಬನಿಗೆ ತಿಳಿದ ತತ್ವ ನಿಮಗೆ ತಿಳಿಯದಾಯಿತು. ಕನಕನು ಜಾತಿಯಲ್ಲಿ ಕುರುಬನಾದರೂ ಅವನ ಜ್ಞಾನದ ಪ್ರಭೆಯು ನಿಮ್ಮೆಲ್ಲರಿಗೂ ಮೀರಿದ್ದು. (ಬ್ರಾಹ್ಮಣರೆಲ್ಲಾ ತಲೆತಗ್ಗಿಸುವರು.) ಬಾ ಕನಕಾ! ನಿನ್ನ ಸೌಭಾಗ್ಯಕ್ಕೆ ಎಣೆಯಿಲ್ಲ. ನಿನ್ನ ಆತ್ಮಜ್ಞಾನವು ವೃದ್ಧಿಯಾಗಲಿ. ನಿನ್ನಿಂದ ಅಹಂಕಾರಿಗಳು ಬುದ್ಧಿಯನ್ನು ತಂದುಕೊಳ್ಳಲಿ. ಎಲ್ಲಿ ನೋಡಿದರೂ ನೀನು ನನ್ನನ್ನೇ ನೋಡುವುದಾದರೆ ಈ ಹಣ್ಣಿನಲ್ಲಿಯೂ ನಾನಿಲ್ಲವೆ ಇದೋ ತೆಗೆದುಕೋ ಪ್ರಸಾದವನ್ನು ಭುಂಜಿಸು.

ಕನಕ : (ಸಾಷ್ಟಾಂಗ ನಮಸ್ಕಾರ ಮಾಡಿ) ಧನ್ಯನಾದೆ. (ತಿನ್ನುವನು) (ಆಗ ಪುರಂದರದಾಸರು ಹಾಡುತ್ತಾ ಪ್ರವೇಶಿಸುವರು. ಎಲ್ಲರು ವಂದಿಸುವರು. ದಾಸರು ಸ್ವಾಮಿಗಳಿಗೆ ವಂದಿಸಲು ಆಶೀರ್ವಾದ ಮಾಡುವರು.)

[ಅನುಬಂಧ ೧೨]

ವ್ಯಾಸ : ದಾಸರೆ! ಕುಳಿತುಕೊಳ್ಳಿರಿ. ಕ್ಷೇಮವೇ?

ದಾಸ : ಸ್ವಾಮಿಗಳ ಅನುಗ್ರಹ.

ವ್ಯಾಸ : ಬಂದ ವಿಷಯವೇನು?

ದಾಸ : ಈದಿನ ಪವಿತ್ರ ಏಕಾದಶಿ, ಪಾದದರ್ಶನಕ್ಕಾಗಿ ಬಂದೆ.

ಗೋವಿ : ಅನಾಯಾಸ ದಾಸರು ಆಗಮಿಸಿದ್ದಾರೆ. ಅವರಿಂದ ಏಕಾದಶಿಯ ಮಹಾತ್ಮೆಯನ್ನು ಕೇಳಬೇಕೆಂದು ನಮ್ಮೆಲ್ಲರಿಗೂ ಅಭಿಲಾಷೆ.

ದಾಸ : ನಿಮ್ಮೆಲ್ಲರ ಅಭಿಲಾಷೆಯಂತೆ ಆಗಲಿ. ಏಕಾದಶಿಯ ಮಹಾತ್ಮೆಯನ್ನು ಹೇಳುವುದೂ ಒಂದು ಭಾಗ್ಯ.

[ಅನುಬಂಧ ೧೪]

ವ್ಯಾಸ : (ಪಂಡಿತರನ್ನು ನೋಡಿ) ಏಕಾದಶಿಯ ವ್ರತದಿಂದ ಮೋಕ್ಷವು ದೊರೆಯುವದೆಂದು ನಮ್ಮ ಹಿರಿಯರ ಭಾವನೆಯಲ್ಲವೇ?

ಭೀಮಾ : ಅಹುದು. ಶಾಸ್ತ್ರಗಳು ಕೂಡ ಇದನ್ನೇ ಹೇಳುತ್ತವೆ.

ಗೋವಿ : ಈ ವ್ರತದಿಂದ ಚಂದ್ರಹಾಸ, ಅಂಬರೀಷ ಮುಂತಾದವರು ಮೋಕ್ಷಕ್ಕೆ ಹೋದ ಉದಾಹರಣೆಗಳು ಎಷ್ಟೋ ಇವೆ.

ವ್ಯಾಸ : ಅಂದಮೇಲೆ ಈದಿನ ಏಕಾದಶಿಯ ವ್ರತವನ್ನು ಆಚರಿಸಿದ ನಿಮ್ಮಲ್ಲಿ ಯಾರು ಮೋಕ್ಷಕ್ಕೆ ಹೋಗುವಿರಿ? (ಎಲ್ಲರೂ ಸುಮ್ಮನಿರುವರು) ಏಕೆ ಸುಮ್ಮನಾದಿರಿ. ಭೀಮಾಚಾರ್ಯರೇ! ನೀವು ಹೇಳಬಹುದಲ್ಲ. ಗೋವಿಂದಾಚಾರ್ಯರೆ ನಿಮಗೆ ತಿಳಿಯದೇನು? (ಎಂದು ಒಬ್ಬೊಬ್ಬರನ್ನು ಕೇಳುತ್ತಾ ಬರುವರು. ಯಾರು ಮಾತನಾಡದಿರಲು ಕಡೆಗೆ ಕನಕನ ಕಡೆ ನೋಡಿ ಭೀಮಾಚಾರ್ಯರ ಕಡೆಗೆ ಬೊಟ್ಟು ಮಾಡಿ) ಕನಕಾ! ನೀನಾದರೂ ಹೇಳಪ್ಪಾ! ಪಂಡಿತರಾದ ಭೀಮಾಚಾರ್ಯರು ಮೋಕ್ಷಕ್ಕೆ ಹೋಗಬಹುದೋ?

ಕನಕ : ಇಲ್ಲ ಮಹಾಸ್ವಾಮಿ!

ವ್ಯಾಸ : ಗೋವಿಂದಾಚಾರ್ಯರೋ?

ಕನಕ : ಅವರೂ ಇಲ್ಲ.

ವ್ಯಾಸ : ಹಾಗಾದರೆ ಪುರಂದರದಾಸರು ಹೋಗಬಹುದಲ್ಲ?

ಕನಕ : ಅವರೂ ಹೋಗಲಾರರು.

ವ್ಯಾಸ : ಇದೇನಪ್ಪಾ! ಕನಕಾ! ನಾನು ಹೋಗಬಹುದೋ?

ಕನಕ : ತಾವೂ ಹೋಗುವುದಿಲ್ಲ.

ವ್ಯಾಸ : ಅಂದಮೇಲೆ ನೀನು ಹೋಗಬಹುದಲ್ಲ?

ಕನಕ : ನಾನು ಹೋದರೆ ಹೋದೇನು (ಬ್ರಾಹ್ಮಣರೆಲ್ಲ ಸಿಟ್ಟಿಗೆ ಬರುವರು).

ಭೀಮಾ : ಒಬ್ಬ ಕೀಳುಕುರುಬ ಮಹಾಸನ್ನಿಧಿಯನ್ನು ಧಿಃಕರಿಸಿ ಮಾತನಾಡಿದ್ದು ಎಂದಾದರೂ ಕೇಳಿದ್ದೀರಾ?

ಗೋವಿ : ಇದು ನಮ್ಮೆಲ್ಲರಿಗೂ ಅವಮಾನ.

ಭೀಮಾ : ನಮ್ಮೆಲ್ಲರಿಗೇ ಅಲ್ಲ ದಾಸಶಿಖಾಮಣಿಗಳಾದ ಪುರಂದರದಾಸರಿಗೂ ಅವಮಾನ.

ಗೋವಿ : ಎಲ್ಲರಿಗಿಂತಲೂ ತಾನೇ ಅಧಿಕನೆಂದು ಗರ್ವಿಸಿದ್ದಾನೆ. ಕುರುಬನಿಗೆ ಮೋಕ್ಷವೇ?

ಭೀಮಾ : ಇದು. ನಮ್ಮ ಸ್ವಾಮಿಗಳು ಅವನಿಗೆ ಸಲಿಗೆಕೊಟ್ಟ ಫಲ. ಈಗ ಎಲ್ಲರೂ ಅನುಭವಿಸಬೇಕಾಗಿದೆ.

ವ್ಯಾಸ : ನೀವೆಲ್ಲರೂ ಸ್ವಲ್ಪ ಸಮಾಧಾನ ತಾಳಿರಿ.

ಭೀಮಾ : ಸಮಾಧಾನ! ಸಮಾಧಾನ! ಎಲ್ಲಿದೆ ದಾಸರೆ. ದೊಡ್ಡ ದೊಡ್ಡವರನ್ನು ಧಿಃಕರಿಸಿ ಮಾತನಾಡಿದ ಮೇಲೆ.

ಗೋವಿ : ಅವನೆಷ್ಟು, ಅವನ ಯೋಗ್ಯತೆಯಷ್ಟು ದಾಸರೆ.

ದಾಸ : ಈ ವಿಷಯ ಅವನನ್ನೇ ಕೇಳಿದರಾಯಿತಲ್ಲ. ನೀವು ಸುಮ್ಮನೆ ಹೀಗೇಕೆ ಕೂಗಿಕೊಳ್ಳುವುದು. ಕನಕಾ ಸುಮ್ಮನೆ ಇರುವೆ ಏಕೆ?

ಕನಕ : (ಎದ್ದು) ಮಹನೀಯರೆ! ನಾನು ಹೇಳಿದ ವಿಷಯ ತಮಗೆ ತಿಳಿಯಲಿಲ್ಲವೆಂದು ಕಾಣುತ್ತೆ.

ಭೀಮಾ : ಏನು ವೇದವೇದಾಂಗ ಪಾರಂಗತರಾದ ನಮಗೆ ತಿಳಿಯಲಿಲ್ಲವೆ?

ಗೋವಿ : ಏನನ್ಯಾಯ! ಏನನ್ಯಾಯ!! ಶುದ್ಧ ಕನ್ನಡವೇ ನಮಗೆ ತಿಳಿಯುವುದಿಲ್ಲವೆಂದರೇನು.

ಕನಕ : ತಿಳಿದಿರಬಹುದು. ನಾನು ಯಾರನ್ನು ಧಿಃಕರಿಸಿ ಮಾತನಾಡಲಿಲ್ಲ "ನಾನು" ಎಂಬ ಅಹಂಕಾರ ಹೋದರೆ ಮಾತ್ರ ಮೋಕ್ಷಕ್ಕೆ ಹೋಗಬಹುದೆಂದು ಹೇಳಿದೆನಲ್ಲದೆ ನಾನೇ ಹೋಗುವೆನೆಂದು ಹೇಳಲಿಲ್ಲ. ತಾವು ಕೋಪಿಸಬಾರದು. ಕ್ಷಮಿಸಬೇಕು.

ದಾಸ : (ಎದ್ದು ಕನಕನನ್ನು ಆಲಂಗಿಸಿ) ಭಲ ಕನಕಾ! ಒಂದು ಸಣ್ಣ ಮಾತಿನಲ್ಲಿ ಎಂತಹ ಗುಪ್ತಾರ್ಥವನ್ನು ಹೇಳಿದೆ.

ವ್ಯಾಸ : ಕನಕಾ! ನಿನ್ನನ್ನು ಏನೆಂದು ಆಶೀರ್ವದಿಸಲಪ್ಪಾ! ನಿಜವಾದ ಶಿಷ್ಯನೆಂದರೆ ನೀನೆ. ಪಂಡಿತರೆಂದು ದೊಡ್ಡವರೆಂದು ಮೆರೆಯುವ ಇವರೆಲ್ಲರೂ ಮನಸ್ಸಿಗೆ ಬಂದಂತೆ

ಮಾತನಾಡಿದರಲ್ಲದೆ ನನ್ನ ಮಾತಿನ ಅರ್ಥವನ್ನು ತಿಳಿಯಲಿಲ್ಲ. ಪಂಡಿತರೆ! ಇನ್ನುಮೇಲಾದರೂ ಕೀಳುಕುಲವೆಂಬ ಭಾವವನ್ನು ಬಿಟ್ಟುಬಿಡಿರಿ. ಎಲ್ಲದಕ್ಕಿಂತಲು ನಾನೆಂಬ ಅಹಂಕಾರವೇ ಕೀಳು. ಅದನ್ನು ಜಯಿಸಲು ನೀವೆಲ್ಲರೂ ದೇವರ ಭಜನೆ ಮಾಡಿರಿ.

[ಅನುಬಂಧ ೧೫]

[ಎಲ್ಲರೂ ಭಜನೆ ಮಾಡುವರು]

– ತೆರೆ –

ಎರಡನೇ ಅಂಕ ನಾಲ್ಕನೇ ನೋಟ

## – ಬೀದಿ –

[ಭೀಮಾಚಾರ್ಯರು, ಗೋವಿಂದಾಚಾರ್ಯರು ಮಾತನಾಡುತ್ತಾ ಬರುವರು]

ಭೀಮಾ : ಸದಾಚಾರಸಂಪನ್ನ ಸರ್ವಾಧಿಕ್ಯ ಬ್ರಾಹ್ಮಣ್ಯವೇನೂ ಉಳಿಯುವಂತಿಲ್ಲ, ಸಾಕು. ಏಕಾದಶಿಯ ದಿನ ಎಲ್ಲರಿಗೂ ಆದ ಅವಮಾನ ಸಾಕು.

ಗೋವಿ : ಸಾಕೆಂದರೆ ಬಿಡುವಂತಿಲ್ಲ ಆಚಾರ್ರೆ, ಅನುಭವಿಸಬೇಕು.

ಭೀಮಾ : ಏನು? ಅನುಭವಿಸಬೇಕೆ? ಅವನಿಗೆ ಹೆದರಿ ಸುಮ್ಮನಿರಬೇಕೆ?

ಗೋವಿ : ಏನು ಮಾಡುವುದು. ಸ್ವಾಮಿಗಳ ಬೆಂಬಲವೇ ಅವನಿಗಿದೆ,

ಭೀಮಾ : ಇದ್ದರೇನು ನಮಗಾದ ಅವಮಾನಕ್ಕೆ ತಕ್ಕ ಪ್ರತೀಕಾರ ಮಾಡಲೇಬೇಕು.

ಗೋವಿ : ಅದು ಹೇಗೆ ಸಾಧ್ಯ?

ಭೀಮಾ : ಇಲ್ಲಿ ಕೇಳು, ನಮ್ಮ ಬ್ರಾಹ್ಮಣರ ಮೇಲೆಂದರೆ ವಿಜಯನಗರದ ಮಹಾರಾಣಿಯವರಿಗೆ ತುಂಬಾ ಭಕ್ತಿ ವಿಶ್ವಾಸ, ಈ ವಿಷಯವೆಲ್ಲ ಹೇಳಿ ಆ ಕುರುಬನನ್ನು ಮಠದಿಂದ ಹೊರಗೆ ನೂಕಿಸಿಬಿಡಬೇಕು.

ಗೋವಿ : ನಿನ್ನ ಉಪಾಯವೇನೋ ಚೆನ್ನಾಗಿದೆ. ಆದರೆ....

ಭೀಮಾ : ಆದರೇನು?

ಗೋವಿ : ಮಹಾರಾಣಿಯವರು ಎಲ್ಲಾ ಜಾತಿಗಳಲ್ಲಿಯೂ ಸಮಭಾವನೆಯಿಂದ ಇದ್ದಾರಂತೆ. ಅಂದಮೇಲೆ ನಿನ್ನ ಉಪಾಯ ಸಾಗುವುದು ಹೇಗೆ?

ಭೀಮಾ : ಅಹುದು. ನೀನು ಹೇಳುವುದು ನಿಜ. ಇದಕ್ಕೆ ಏನು ಉಪಾಯ ಮಾಡಬೇಕಾದೀತು (ಎಂದು ಆಕಡೆ ಈಕಡೆ ಅಡ್ಡಾಡುವನು.).... ಹಾ.... ಗೋವಿಂದಾಚಾರ್ರೇ!

ಗೋವಿ : ಏನು ಭೀಮಾಚಾರ್ರೇ!

ಭೀಮಾ : ಒಳ್ಳೇ ಉಪಾಯ ಸಿಕ್ಕಿತಯ್ಯ

ಗೋವಿ : ಅದೇನು?

ಭೀಮಾ : ರೂಪಸುಂದರಿ ನಿನಗೆ ಗೊತ್ತುಂಟೋ?

ಗೋವಿ : ಯಾವ ರೂಪಸುಂದರಿ?

ಭೀಮಾ : ಅವಳೀಗ ಕೆಲವು ದಿನಗಳ ಹಿಂದೆ ಹೊಸದಾಗಿ ರತ್ನ ಮಂಜರಿಯ ಮನೆಗೆ ಬಂದಿದ್ದಾಳೆ.

ಗೋವಿ : ಓ.... ಅವಳೇ ಸರಿ. ಆಚಾರ್ರೆ ಅವಳು ಯಾವ ಕಡೆಯವಳು?

ಭೀಮಾ : ಓ ಅವಳದೊಂದು ದೊಡ್ಡ ಕಥೆ ಏನೇನೊ. ಈಗದು ಬೇಡ. ಅವಕಾಶವಿಲ್ಲ ಈಗ.

ಭೀಮಾ : ಅವಳ ಸಹಾಯದಿಂದ ಕನಕನ ಶೀಲಭಂಗ ಮಾಡಬೇಕು. ಪ್ರಪಂಚದಲ್ಲಿ ತಲೆಯೆತ್ತದಂತೆ ಮಾಡಬೇಕು. ನಮಗಾಗಿದ್ದ ಅವಮಾನವನ್ನು ಈ ರೀತಿಯಿಂದ ತೀರಿಸಿಕೊಳ್ಳಬೇಕು.

ಗೋವಿ : ಇಷ್ಟೇನೆ ನಿನ್ನ ಬುದ್ಧಿ, ಅಲ್ಲವಯ್ಯಾ! ಹೆಣ್ಣು ತಾನಾಗಿ ಒಲಿದು ಬಂದರೆ ಯಾರು ಬೇಡವೆನ್ನುವರು. ಎಂಥೆಂಥ ಮಹನೀಯರೋ ಇದಕ್ಕೆ ಶರಣಾಗತರಾಗಿದ್ದಾರೆ. ಇನ್ನು ಆ ಕುರುಬನ ಪಾಡೇನು?

[ಕನಕನು ಹಾಡುತ್ತಾ ಬರುವನು]

[ಅನುಬಂಧ 16]

ಕನಕ : ಮಹನೀಯರಿಗೆ ನಮಸ್ಕಾರ!

ಭೀಮಾ : ಓಹೋ! ಕನಕನೇನು. ಏನು ಸಮಾಚಾರ?

ಗೋವಿ : ಎಲ್ಲಿಗೆ ಹೊರಟಿದ್ದೀಯೋ?

ಕನಕ : ಸ್ವಾಮಿ! ಮಹಾತ್ಮರಾದ ಪುರಂದರದಾಸರನ್ನು ನೋಡಬೇಕೆಂದು ಹೊರಟಿದ್ದೇನೆ. ಆದರೆ ಅವರೆಲ್ಲಿರುವರೆಂಬುದು ಗೊತ್ತಿಲ್ಲ. ದಯಮಾಡಿ ಅವರ ಸ್ಥಳವನ್ನು ತಿಳಿಸುವಿರಾ?

ಭೀಮಾ : ದಯಾಬೇಡ, ಧರ್ಮಬೇಡ. ಇಲ್ಲಿಗೆ ಸ್ವಲ್ಪದೂರ ಊರ ಹೊರಗೆ ಅವರದೊಂದು ಮಂಟಪವಿದೆ. ಇದೇ ಹಾದಿಯಿಂದಲೇ ಹೋಗು.

ಕನಕ : ಸಂತೋಷ (ಎಂದು ಹಾಡುತ್ತಾ ಹೋಗುವನು)

ಭೀಮಾ : ಈಗ ಒಳ್ಳೇಸಮಯ. ದಾಸರು ಊರಲ್ಲಿ ಇಲ್ಲ. ಬೇಗ ಹೋಗಿ ಆ ರೂಪಸುಂದರಿಗೆ ಹೇಳುವುದೆಲ್ಲ ಹೇಳಬೇಕು.

ಗೋವಿ : ಅವಳು ಇಷ್ಟು ಬೇಗ ಒಪ್ಪುವ....

ಭೀಮಾ : ಎಲ್ಲಾ ಕೊರಡು ಬುದ್ಧಿ. ಆಚಾರ್ರೇ! ಬೇಗಬನ್ನಿ.

[ಹೋಗುವರು]

ಎರಡನೇ ಅಂಕ ಐದನೇ ನೋಟ

## – ರೂಪಸುಂದರಿಯ ಮನೆ –

[ಅನುಬಂಧ ೧೭]

ಭೀಮಾಚಾರ್ಯ ಗೋವಿಂದಾಚಾರ್ಯರು ಸುಖಾಸೀನರಾಗಿರಲು ರೂಪಸುಂದರಿಯು ಪುರಂದರದಾಸರ "ಮೆಲ್ಲಮೆಲ್ಲನೆ ಬಂದನೆ ಗೋಪಮ್ಮ ಕೇಳೇ" ಎಂಬ ಗೋಪಿಕಾ ಗೀತೆಯನ್ನು ಹಾಡುತ್ತಾ ಅಭಿನಯಿಸುತ್ತಿರುವಳು. ಆಚಾರ್ಯರು ತನ್ಮಯರಾಗಿ ತಲೆದೂಗುತ್ತ ನಾಟ್ಯಾಭಿನಯದಗತ್ತಿಗೆ ತೊಡೆಯಮೇಲೆ ಕೈಯಿಂದ ತಾಳ ಕುಟ್ಟುತ್ತಿರುವರು. ನಾಟ್ಯವು ಮುಗಿಯುವುದು. ಭೀಮಾಚಾರ್ಯರು ಹಾಗೆಯೇ ತಲೆದೂಗುತ್ತಿರುವರು. ಗೋವಿಂದಾಚಾರ್ಯರು ಬೆಪ್ಪಾಗಿ ನೋಡುತ್ತಿರುವರು.

ಭೀಮಾ : (ನಾಟ್ಯ ಮುಗಿದ ಪರಿವೆಯಿಲ್ಲದೆ ತನ್ಮಯನಾಗಿ) ಓ ಹೋ ಹೋ ಹೋ ಹೋ ಏನು ಸಾಹಿತ್ಯ, ಇದೇನು ಸಂಗೀತ, ಇದೆಂತ ನಾಟ್ಯ, ಇದೆಂತಹ ಲಾಲಿತ್ಯ....

ಗೋವಿ : (ಬರುವ ನಗೆಯನ್ನು ತಡೆದು) ಆ ಹಾ ಹಾ ಹಾ ಹಾ ಇದೆಂತ ಭ್ರಾಂತಿ. ಇದೆಂತ ಉತ್ಸಾಹ, ಇದೆಂತ ಉನ್ಮಾದ, ಭೀಮಾಚಾರ್ಯರೇ! ಅದೆಲ್ಲಾ ಮುಗೀತ್ರೀ....

ಭೀಮಾ : (ಎಚ್ಚತ್ತು ಕೆಕ್ಕರಿಸಿನೋಡಿ) ಮುಗೀತು? ಏನು ಮುಗಿಯಿತು?

ಗೋವಿ : ನಾಟ್ಯ.

[ರೂಪಸುಂದರಿ ಕಾಲಿನ ಗೆಜ್ಜೆಯನ್ನು ಸಡಲಿಸುತ್ತ ಗುಸುಗುಸು ನಗುವಳು]

ಭೀಮಾ : ಓ ಅಹುದಲ್ಲಾ ಗೋವಿಂದಾಚಾರ್ರೆ! ಇಂಥಾ ನಾಟ್ಯ ನೀವೆಂದಾದರೂ ನೋಡಿದ್ದೀರಾ?

ಗೋವಿ : ಅಯ್ಯೋ ನಾವೆಲ್ಲಿ ನೋಡ್ತಿವ್ರೀ. ತೊಳೆದದ್ದೆ ತೊಳೆಯೋದು. ಅಂದದ್ದೇ ಅನ್ನೋದು ಮಾಡಿದ್ದೇ ಮಾಡೋದು ಈ ಗೊಡ್ಡು ವೈದಿಕರು ನೋಡಲಿಕ್ಕಾದರೂ ಸಮಯ ಸಿಕ್ಕೋದು ಹೇಗ್ರಿ ಆಚಾರ, ವಿಚಾರ, ಪೂಜ, ಪುರಸ್ಕಾರ, ಮಠ, ಮಾನ್ಯ ಇದರಲ್ಲೇ ಮಡಿದುಹೋಗುತ್ತೆ ಈ ಘಟ ಪುರಂದರದಾಸರ ಕೀರ್ತನೆ ಕೇಳಿಲ್ಲವೆ?

ಭೀಮಾ : ಎಷ್ಟೋ ಕೇಳಿದ್ದೇನೆ. ನೀವು ಹೇಳೋ ಕೀರ್ತನೆ ಯಾವುದು?

ಗೋವಿ : ಅದೇ ವೈದಿಕರ ಬಗ್ಗೆ ಕಟ್ಟಿ ಹಾಡಿದ ಕೀರ್ತನೆ.

[ಕೀರ್ತನೆ ಕೇಳುವ ನೆಪದಿಂದ ರೂಪಸುಂದರಿಯು ಗೋವಿಂದಾಚಾರ್ಯರ ಬಳಿ ಬಂದು ಕೂಡುತ್ತಿರುವಲ್ಲಿ]

ಭೀಮಾ : ಬನ್ನಿ ಬನ್ನಿ ಈಕಡೆ ಈಕಡೆ (ಎಂದು ತನ್ನ ಕಡೆ ಕೈತೋರಿಸುತ್ತ ಸರಿದು ಕೂತು) ಏನು ವೈಯಾರ, ಏನು ಸಿಂಗಾರ (ದಿಟ್ಟಿಸಿ ನೋಡಿ) ಅಹುದು ನೀನು ರೂಪಸುಂದರಿಯೇ ಆದರೆ ಈ ಕಲೆಯಲ್ಲಾ ನಿನಗೆ ಹೇಗೆ ಸಾಧಿಸಿತೂಂತ.

ಸುಂದರಿ : (ಗೋವಿಂದಾಚಾರ್ಯರ ಕಡೆ ಓರೆ ನೋಟವನ್ನು ಬೀರುತ್ತ ಭೀಮಾಚಾರ್ಯರ ಕಡೆ ಕೊರಳು ಕೊಂಕಿಸಿ) ತಮ್ಮ ಕೃಪೆಯಿಂದ.

ಗೋವಿ : ಏನು ಅವರ ಕೃಪೆ?

ಸುಂದರಿ : ಏಕಾಗಬಾರದು?

ಗೋವಿ : ಛೇ ಛೇ ಆಗಬಾರದೂಂತಲ್ಲ. ಈಗ ಆಗಿಯೇ ಆಗಿದೆ. ಅದಕ್ಕಲ್ಲ ನಾನು ಹೇಳಿದ್ದು. ಇದಕ್ಕೆ ಮುಂಚೆ ಅವರ ಕೃಪೆ ನಿಮಗಾಗಿತ್ತೇನೂಂತ?

ಸುಂದರಿ : (ಕಿಲಕಿಲನೆ ನಕ್ಕು ಭೀಮಾಚಾರ್ಯರನ್ನು ನೋಡಿ) ನಿಮ್ಮ ಸ್ನೇಹಿತರು ಮಾತಿನಲ್ಲಿ ಒಳ್ಳೆ ರಸಿಕರೆಂದು ಕಾಣುತ್ತದೆ.

ಭೀಮಾ : ಕಾಣೋದೇನು, ಶೃಂಗಾರ ಕಾವ್ಯಗಳನ್ನು ತಲೆಕೆಳಗೆ ತಿರುವಿ ಹಾಕಿದ ರಸಿಕ ಶಿಖಾಮಣಿ.

ಗೋವಿ : ಅಯ್ಯೋ ಚಿಕ್ಕಾಮಣಿ. ತಮ್ಮ ಮುಂದೆ ನಾನ್ಯಾವಗಿಡದ ತೊಪ್ಪಲರೀೀ

ಸುಂದರಿ : ಅಂತು ನಾವಿಬ್ಬರೂ ಒಳ್ಳೇ ರಸಿಕರೆಂದು ತಿಳಿದಂತಾಯಿತು. (ಇಬ್ಬರೂ ತಮ್ಮನ್ನು ತಾವೇ ಮೆಚ್ಚಿಕೊಂಡು ಹಿಗ್ಗಿ ನಲಿದಾಡುತ್ತಾ ತಮ್ಮ ಉಡುಪುಗಳನ್ನು ತಿದ್ದಿಕೊಳ್ಳುವರು). ಇಂದು ತಾವಿಲ್ಲಿಗೆ ದಯಮಾಡಿಸಿದ್ದು ನನ್ನ ಭಾಗ್ಯ. (ಒಬ್ಬರೊಬ್ಬರು ನೋಡಿಕೊಂಡು ಬೆಚ್ಚಿಬೀಳುವರು) ತಾವು ದೊಡ್ಡವರು, ಪಂಡಿತರು, ಮಹಾನುಭಾವರು, ಈ ಬಡದಾಸಿಯ ಅಲ್ಪ ಆತಿಥ್ಯ ಸ್ವೀಕರಿಸಬೇಕಾಗಿ ಪ್ರಾರ್ಥನೆ.

ಗೋವಿ : ನೋಡಿದಿರಾ! ನೋಡಿದಿರಾ!! ಭಯ, ಭಕ್ತಿ ವಿನಯ, ಹೀಗಿರಬೇಕು. ನಾನೆಷ್ಟೋ ನೋಡಿದ್ದೇ... (ನಾಲಿಗೆ ಕಚ್ಚಿ ಮಾತಿನ ಭಾವ ಬದಲಾಯಿಸಿ) ಅಲ್ಲ.... ಹೂಂ.... ಈಗ.... ನೀನು.... ಏಕೆ ಆಚಾರ್ಯರೆ! ಈಗ ನಾಟ್ಯದಿಂದ ನಮಗಾದ ಆತಿಥ್ಯ ಸಾಲದೆ.

ಭೀಮಾ : ಸಾಲದೇನು ಸಂತೃಪ್ತಿಯಾಗಿದೆ. "ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಎಂದು ಕಾಳಿದಾಸನ ಅನುಭವದ ವಾಕ್ಯ ಎಂದಾದರೂ ಸುಳ್ಳಾದೀತೇನಯ್ಯಾ-

ಗೋವಿ : ಉಂಟೇ. ಆದರೆ ಕೆಲವರ ನಾಟ್ಯ ನೋಡಿದಾಗ ಮಾತ್ರ ಸುಳ್ಳೂ ಆಗಬಹುದು. ಅಂತು ನಾವು ಬಂದಕಾರ್ಯ ಏನೇ ಆಗಲಿ ಸುಂದರಿಯ ಸುಂದರ ನಾಟ್ಯಾಭಿನಯದಿಂದ ಆನಂದವಾಯಿತು.

ಸುಂದರಿ : ಅಂತೂ ಏನೋ ಒಂದು ಮಹತ್ಕಾರ್ಯಕ್ಕಾಗಿಯೇ ಬಂದದ್ದು.

ಭೀಮಾ : ಅಹುದು. ಆ ಸಹಾಯ ಈಗಿಂದೀಗಲೇ ಆಗಬೇಕು.

ಸುಂದರಿ : (ಕೊಂಚ ಯೋಚನೆಯಿಂದ ಹಣೆಯಲ್ಲಿ ಸುಕ್ಕಿಟ್ಟು) ಅದಾವ ಸಹಾಯ? ಅದು ಈಗಿಂದೀಗಲೇ? ನನ್ನಿಂದ. ಈ ಬಡ ದಾಸಿಯಿಂದ. ಇದೇನು ಸೋಜಿಗ? ಮಹಾ ಪಂಡಿತರಾದ ತಾವೆಲ್ಲಿ ಪಾಮರಳಾದ ನಾನೆಲ್ಲಿ.

ಭೀಮಾ : ಎಲ್ಲರೂ ಈ ಮನೆಯಲ್ಲಿ ಸುಂದರಿ! ನಮ್ಮ ಪಾಂಡಿತ್ಯಕ್ಕೆ ಇಂದು ಸಂಪೂರ್ಣ ಗ್ರಹಣ ಆ ಗ್ರಹಣದ ಗ್ರಹವನ್ನೇ ನೀನೀಗ ಉಚ್ಚಾಟನೆ ಮಾಡಬೇಕು.

ಸುಂದರಿ : (ಹೆದರಿ) ಗ್ರಹಣ? ಉಚ್ಚಾಟನೆ. ಅಯ್ಯೋ! ಇದೇನು ಬಂತು.

ಭೀಮಾ : (ನಕ್ಕು) ಯಲಯಲ ಏಕೆ ಹೆದರುತ್ತಿ ಸುಂದರಿ! ಇವೆಲ್ಲಾ ಉಪಮಾನಗಳು.

ಗೋವಿ : (ಬೇಸರಗೊಂಡು) ಆಚಾರ್ರೆ! ಈ ಉಪ್ಪು ಬೇಡ, ಕಾರಬೇಡ, ಆ ದೇವಭಾಷೆ ಬಿಟ್ಟು ಮನುಷ್ಯರ ಮಾತಿನಲ್ಲಿ ಹೇಳ್ರಿ

ಭೀಮಾ : ಆ ಆ ಆಗಲಪ್ಪಾ! ಸುಂದರಿ! ಇಲ್ಲಿನೋಡು.... ರಹಸ್ಯ ಬಹುರಹಸ್ಯ. (ಹಿಂದು ಮುಂದು ನೋಡುವನು).

ಸುಂದರಿ : ತಾವೇನು ಸಂಕೋಚಪಡಬಾರದು. ನಮ್ಮನೇ ಬಾಗಿಲು ಒಳಹೊಕ್ಕ ಯಾವ ರಹಸ್ಯಗಳೂ ಇಂದಿಗೂ ಹೊರಬಂದಿಲ್ಲ.

ಗೋವಿ : ಅದಕ್ಕೆಂತಲೇ ನಿಮ್ಮ ತಲೆಬಾಗಿಲ ಒಳಹೊಕ್ಕದ್ದು.

ಸುಂದರಿ : ಸಂತೋಷ. ಅದೇನೊ ಅಪ್ಪಣೆಯಾಗಲಿ.

ಭೀಮಾ : ಆಗೋದೇನು. ಅದು ಇಷ್ಟೆ. ಅವ ಆ ಕುರುಬ....

ಗೋವಿ : ಕನಕ! ಈಗ ಕೆಲವು ದಿನಗಳ ಹಿಂದೆ ನಮ್ಮ ವ್ಯಾಸರಾಯಮಠ ಸೇರಿದ....

ಭೀಮಾ : ಏನೋ ಬಂದಿದ್ದಾನೆ, ಮಠದಲ್ಲಿ ಕಸಗುಡಿಸಿಕೊಂಡಿರಲೀಂತ ನಾವೆಲ್ಲ ಸುಮ್ಮನಿದ್ದೆವು.

ಗೋವಿ : ಅವನೇಕೆ ಸುಮ್ಮನಿದ್ದಾನು. ಮೆಲ್ಲಮೆಲ್ಲನೆ ಮಹಾಸ್ವಾಮಿಗಳ ಅನುಗ್ರಹ ಸಂಪಾದಿಸಿ....

ಭೀಮಾ : ಮಠದ ಮಹಾ ಪಂಡಿತರಾದ ನಮ್ಮ ಬುನಾದಿಯ ಕಲ್ಲಿಗೇನೆ ಸನ್ನೆ ಹಾಕಿದ.

ಸುಂದರಿ : ಓಹೋ.... ದೊಡ್ಡನಾಟಕವೇ ನಡೆದಿದೆ ಎನ್ನಿ. ಆದರೆ ಈಗ ನಾನೇನು ಮಾಡಬೇಕು?

ಭೀಮಾ : ಈ ನಾಟಕದಲ್ಲಿ ಪಾತ್ರವಹಿಸಬೇಕು.

ಸುಂದರಿ : ಪಾತ್ರ, ಯಾವ ಪಾತ್ರ?

ಗೋವಿ : ನಾಯಕಿಯ ಪಾತ್ರ.

ಸುಂದರಿ : ನಾನೊಲ್ಲೆ ಸ್ವಾಮಿ! ನಾಟಕದಲ್ಲಿ ನಾನೆಂದು ಪಾತ್ರವಹಿಸಿಲ್ಲ.

ಭೀಮಾ : ಯಲ ಯಲ. ಈ ಪಾತ್ರ ಯಾವುದೆಂದು ತಿಳಿದಿರುವಿ. ಇದೇ ನಾಟಕದ ಪಾತ್ರ, ನಾಟಕವೆಂದರೆ ಅದೇನೋ ಬೇರೆ ಎಂದು ಭಾವಿಸಿದಂತೆ ಕಾಣುತ್ತೆ. ಇಲ್ಲಿ ನೋಡು ಇದುವರಿಗೂ ನಮ್ಮ ಮುಂದೆ ನೀನಾಡಿದ ಪಾತ್ರ ಯಾವ ನಾಟಕದ ಪಾತ್ರಕ್ಕಿಂತ ಕಡಿಮೆ ಇದೆ. ಯಾಕ್ರೀ ಗೋವಿಂದಾಚಾರ್‍ರೆ!

ಗೋವಿ : ಯೋಗ್ಯವಾದ ಅಭಿಪ್ರಾಯ. ಪಾತರದವರಿಗೆ ಪಾತ್ರ ಹೇಳಿ ಕೊಡಬೇಕೆ. ಈಗಿರುವ ಈ ಪಾತ್ರ ಹೀಗೆಯೇ ಮುಂದುವರಿದಲ್ಲಿ ನಾಟಕವೇ ಯಶಸ್ವಿಯಾಗುವುದು.

ಸುಂದರಿ : ಸರಿಹೋಯಿತು. ಈ ನಿಮ್ಮ ನಾಟಕದ ವಿನೋದ ಚೆನ್ನಾಗಿದೆ.... ಇರಲಿ.... ನಾಯಕ?

ಭೀಮಾ : ಕನಕ.

ಸುಂದರಿ : ಅಂದರೆ ಈ ಮೊದಲು ನೀವು ಹೇಳಿದ.... ಆ....

ಗೋವಿ : ಹೂಂ ಅವನೇ ಕುರುಬ.

ಸುಂದರಿ : ಸರಿ, ತರುವಾಯ.

ಭೀಮಾ : ಅದೆಲ್ಲಾ ಹೇಳಬೇಕೇ. ನಾಯಕಿಯಾದವಳು ತನ್ನ ಹಾವ ಭಾವ ವಿಲಾಸಗಳಿಂದ ನಾಯಕನನ್ನು ಒಲಿಸಿ....

ಸುಂದರಿ : ಛೀ – ಕಗ್ಗ ಕುರುಬನ ಸಹವಾಸ. ಆಚಾರೀ ಸ್ವಾಮಿಗಳೇ ನಿಮ್ಮ ನಾಟಕದ ಗೊಡವೆಯೇ ಬೇಡ. ಸನ್ಯಾಸಿ ಮೈ ತಾಕಿದರೆ ಮೈಯೆಲ್ಲಾ ಬೂದಿ (ಎಂದು ಬೇಸರದಿಂದ ಏಳುತ್ತಿರುವಲ್ಲಿ ತಡೆದು.)

ಗೋವಿ : ಈ ನಾಟಕ ಹಾಗಲ್ಲ. ಪಾತ್ರಕ್ಕೆ ತಕ್ಕ ಪ್ರತಿಫಲ ಇದ್ದೇ ಇದೆ. ನೀನೇನೂ ಅನುಮಾನಿಸಬೇಡ.

ಸುಂದರಿ : (ಆಸೆಯಿಂದ ಕುಳಿತುಕೊಂಡು) ಅಯ್ಯೊ ತಮ್ಮಲ್ಲಿ ಅನುಮಾನವೇ ತಮ್ಮ ಆಶೀರ್ವಾದವಿದ್ದರೆ ಸಾಕು. ಆದರೆ ನನ್ನಿಂದ ಇಂತಾ ನಾಟಕವು ಆಡಿಸುವುದರಿಂದ ತಮಗಾಗುವ ಉಪಯೋಗ?

ಭೀಮಾ : ಅನಂತವಾಗಿದೆ. ಈಗ ಅದೆಲ್ಲಾ ಹೇಳಲು ಸಮಯವಿಲ್ಲ. (ಹಣದ ಚಿಕ್ಕ ಕೈಚೀಲವನ್ನು ಕೊಡಲು ಹೋಗಲು ಸುಂದರಿಯು ತಡೆದು ಕೊಂಚ ಸರಿದು)

ಸುಂದರಿ : ಇದೇನು, ಬೇಡ, ಬೇಡ ತಮ್ಮ ಕೃಪೆಯಿದ್ದರೆ ಸಾಕು.

ಭೀಮಾ : ಕೃಪೆಗೇನು ಬಂತು. ಆ ಕೃಪೆಯೇ ಇಂದು ಈ ರೂಪತಾಳಿದೆ. ತಿಳಿದುಕೋ ಊ ಹಿಡಿ (ಎಂದು ಕೈಮುಟ್ಟಿ ಕೊಡುವನು)

ಗೋವಿ : ಹೇಗಾದರೂ ಇಂದು ಆ ಕುರುಬನನ್ನು ನಿನ್ನ ತೋಳಬಲೆಯಲ್ಲಿ ಬಿಗಿಯಲೇಬೇಕು.

ಭೀಮಾ : ತರುವಾಂಯ ನಾವು ಇಲ್ಲಿಂದ ಅವನನ್ನು ಹೊರಡಿಸಲೇಬೇಕು.

ಸುಂದರಿ : (ಕನಿಕರದಿಂದ) ಅಯ್ಯೋಪಾಪ.

ಗೋವಿ : ಅಯ್ಯೊ ಪಾಪ? ಏನು ಪಾಪ. ಹೀಗೆಲ್ಲಾ ಪಾಪಾಂತ ಕನಿಕರ ತೋರಿದ್ರೆ ಅವನ ಕರ್ಮಕ್ಕೆ ನಿನ್ನ ಕರ್ಮ ಸೇರಿ ನಮಗೆ ಸುತ್ತಿಕೊಂಡೀತು. ಮಹರಾಯಗಿತ್ತೀ! ಈಗಿರೋ ಕರ್ಮನೆ ಸಾಕು.

ಸುಂದರಿ : ನೀವಂತು. ಏನೋಸುಮ್ಮನೆ ಹಾಗಂದೆ. ಅಂದದ್ದೆಲ್ಲಾ ನಿಜವೆ.

ಭೀಮಾ : ಗೋವಿಂದಾಚಾರ್ರೇ! ಬೇರೆಯವರಂತಲ್ಲ ಈ ಸುಂದರಿ. ಆಕೆಗೆ ಮಾತು ಬೇಕು. ಮನುಷ್ಯರು ಬೇಕು. ನಮ್ಮಂತಹ ಸದ್ಬ್ರಾಹ್ಮಣರ ಆಶೀರ್ವಾದ ಬೇಕು ಅಷ್ಟೆ. ಸುಂದರಿ ಈಗ ಆ ಕನಕ ಪುರಂದರದಾಸರ ಮಂಟಪಕ್ಕೆ ಬಂದಿರುತ್ತಾನೆ. ಎಲ್ಲಾ ಭಾರ ನಿನ್ನದು. ಇನ್ನು ನಾವು ಬರೋಣವೇ.

ಸುಂದರಿ : ಆಗಲಿ. ಆದರೆ (ಗೋವಿಂದಾಚಾರ್ಯರಕಡೆ ತಿರುಗಿ) ಪುರಂದರದಾಸರು ಯಾವುದೋ ಕೀರ್ತನೆ ಬರೆದಿದ್ದಾರೆಂದು ಹೇಳಿದಿರಲ್ಲ.

ಭೀಮಾ : ಅಹುದು, ಅದು ಯಾವುದಯ್ಯ ಎಲ್ಲಿ ಕೊಂಚಹಾಗೆ ಹೇಳ್ರಿ

ಗೋವಿ : ಈಗ ಹೇಳಲೇಬೇಕೆನು.

ಸುಂದರಿ : ಅಹುದು ಹೇಳಿಯೇ ಹೋಗಬೇಕು.

[ಅನುಬಂಧ ೧೮]

[ಒಲ್ಲೆ ವೈದಿಕಗಂಡನ, ಎಂಬ ಹಾಡು ಗೋವಿಂದಾಚಾರ್ಯರು ಹಾಡಿ ಮುಗಿಸುತ್ತಿರುವಲ್ಲಿಯೇ ಬಾಗಿಲು ತಟ್ಟಿದ ಸದ್ದಾಗುವುದು ಸುಂದರಿ ಎಂದು ಕೂಗು ಕೇಳುವುದು, ಆಚಾರ್ಯರು ಗಾಬರಿಯಾಗುವರು]

ಭೀಮಾ : ಹಾ! ಯಾರು ಸುಂದರಿ ಕೂಗಿದವರು ಯಾರು?

ಗೋವಿ : ಅಯ್ಯಯ್ಯೊ! ಇದೇನು ಬಂತಪ್ಪಾ! ಕೂಗ್ತಾನೆ ಇದ್ದಾರೆ.

ಸುಂದರಿ : (ನಕ್ಕು) ಅಯ್ಯೋ ಇದೇಕೆ ಸ್ವಾಮಿ! ಹೀಗೆ ಹೆದರುತ್ತೀರಿ. ಅವರು ಹೀಗೇ.

ಭೀಮಾ : ಹಾ ಅವರ ಹೆಸರು

ಸುಂದರಿ : ಮೋಹನ

ಗೋವಿ : ಅಯ್ಯೋ, ಮೋ....ಹನ.... ನಮ್ಮ ಮಾನ?

ಸುಂದರಿ : ಭಯವೇನು ಇಲ್ಲ. ಈಕಡೆ ಹಿತ್ತಲಕಡೆಯಿಂದ ಹೊರಡಿ. (ಕೂಗು ದೊಡ್ಡದಾಗುವುದು) ಇದೋ ಬಂದೆ ಬಂದೆ. (ಸುಂದರಿಯು ಬಾಗಿಲು ತೆರೆಯಲು ಹೋಗುವಳು, ಆಚಾರ್ಯರು ಲಗು ಬಗೆಯಿಂದ ಮನೆಯ ಹಿತ್ತಲ ಬಾಗಿಲಿಂದ ಗಾಬರಿಗೊಂಡು ಹೊರಡುವರು.)

[ತೆರೆ]

ಎರಡನೇ ಅಂಕ ಆರನೇ ನೋಟ

## – ಪುರಂದರದಾಸರ ಮಂಟಪಕ್ಕೆ ಹೋಗುವ ದಾರಿ –

[ಭೀಮಾಚಾರ್ಯರು – ಗೋವಿಂದಾಚಾರ್ಯರು ಗೆಲುವಿನ ನಗೆಯಿಂದ ಪ್ರವೇಶಿಸುವರು. ಗೋವಿಂದಾಚಾರ್ಯನು ತನ್ಮಯತೆಯಿಂದ ಅಂಗೈ ತಾಳ ಕುಟ್ಟುತ್ತಾ ಬರುವನು.]

ಗೋವಿ : (ಅದೂವರೆಗೂ ಗುನುಗುತ್ತಿದ್ದ ಹಾಡು ದೊಡ್ಡ ದನಿಯಾಗಿ ಹೊರಬರುವುದು).

"ಎಂತಾ ಸುಂದರ ರೂಪ ಮೋಹದ ದೀಪಾ
ಕಂತುಹರನತಿ ಭ್ರಾಂತಿಗೊಳಿಸುವ ದಂತಪಕ್ತಿಯ
ಕಾಂತಿಕಾಂತೆಯು"

ಭೀಮಾ : ಈ ಹಾಡುಕೂಡ ದಾಸರು ಹಾಡಿದ್ದೇನು ಆಚಾರ್ರೆ?

ಗೋವಿ : ಛೆ ಛೆ ಛೆ ಇಲ್ಲ ಇಲ್ಲ. ನಾನು ಹಾಡಿದ್ದು.

ಭೀಮಾ : ಹಾಡಿದ್ದೇನೋ ನೀವೇ ಆದರೆ ಬರೆದದ್ದು?

ಗೋವಿ : (ಮಂದಹಾಸದಿಂದ ಕೊಂಚ ಸಾವರಿಸಿಕೊಂಡು) ನಾನೇ.

ಭೀಮಾ : ಓಹೋ ಹಾಗೋ ಊಂ ಸರಿ. ಈ ಕವಿತ್ವದ ರೋಗ ನಿಮಗೆಂದಿನಿಂದ ಅಂಟಿಕೊಂಡಿತೂಂತ.

ಗೋವಿ : ರೂಪಸುಂದರಿಯನ್ನು ನೋಡಿದಾಗಿನಿಂದ ಏಕೆ ಚೆನ್ನಾಗಿಲ್ಲವೆ?

ಭೀಮಾ : ಚೆನ್ನಾಗಿಲ್ಲವೆ ಏನು ಶಾರದೆಯ ವರಪುತ್ರ, ಸಕಲಕವೀಂದ್ರರೋಳ್ ಸುಚರಿತ್ರ, ಕಾವ್ಯಕ್ಷೇತ್ರ, ಕಾಮದಸೂತ್ರ ಗುರುಗೋವಿಂದ ಕೇಳೆಂದ.

ಗೋವಿ : ಇದೇನ್ರಿ ಇದ್ದಕ್ಕಿದ್ದಂತೆ ಆಶುಕವಿತ್ವಾನೇ ಆರಂಭಿಸಿದಿರಲ್ಲ. ನನ್ನರೋಗ ನೀವೇಕೆ ಅಂಟಿಸಿಕೊಳ್ಳುತ್ತೀರಿ.

ಭೀಮಾ : ಸಹವಾಸವಪ್ಪಾ! ಸಹವಾಸ. ಆ ಸುಂದರಿಯನ್ನು ನೋಡಿದೋರಿಗೆಲ್ಲಾ ಹೀಗೆ ಆಗುತ್ತದೋ ಏನೋ.

ಗೋವಿ : ಅಲ್ರಿ ಆಚಾರ್ರೆ! ಈ ಕವಿತ್ವದ ರಗಳೆ ಹಾಗಿರಲಿ, ನಾವೇನೋ ಅವಳಿಗೆ ಹೇಳಿಬಂದದ್ದಾಯಿತು. ಆದ್ರೆ ಆಕೆ ಸಿಂಗಾರಾಗಿ ಬರೋದ್ರೊಳಗೆ ಆ ಕುರುಬ ಅಲ್ಲಿಂದ ಕಂಬಿಕಿತ್ತಿದರೆ ಹೇಗಂತ?

ಭೀಮಾ : ಅವನೆಲ್ಲಿಗೆ ಹೋಗುತ್ತಾನ್ರೀ – ಪುರಂದರದಾಸರೆಂದರೆ ಅವನಿಗೆ ಎಲ್ಲಿಲ್ಲದ ಅಭಿಮಾನ ಅವರು ಬರುವವರೆಗೂ ಕಂಬಳಿ ಹೊದ್ದು ಅಲ್ಲೇ ಕೂತಿರುತ್ತಾನೆ.

ಗೋವಿ : ಏನಾದರೂ ಈ ಸುಂದರಿ ಬರಲು ಇಷ್ಟೇಕೆ ಆಲಸ್ಯಾಂತ.

[ರೂಪಸುಂದರಿಯ ಹಾಡು ಒಳಗಿನಿಂದ ಕೇಳಿಬರುವುದು]

ಭೀಮಾ : ಅದೋ ಅದೋ ಅವಳಿತ್ತಲೇ ಬರುತ್ತಾಳೆ. ಇನ್ನು ನಮ್ಮ ಕಾರ್ಯವಾಯಿತು. (ಹೋಗುವರು.)

[ರೂಪಸುಂದರಿಯು ಹಾಡುತ್ತಾ ಬಂದು ರಂಗದಲ್ಲಿ ನಿಲ್ಲದೆ ಹಾಗೆಯೇ ಹೋಗುವಳು]

ಎರಡನೇ ಅಂಕ ಏಳನೇ ನೋಟ

## – ಪುರಂದರದಾಸರ ಮಂಟಪ –

[ಮಂಟಪದಲ್ಲಿ ವಿಠಲನ ಪ್ರತಿಮೆ ಇದೆ. ನೌಕರರು ಕಸಗುಡಿಸುತ್ತ ಹಾಡುತ್ತಿರುವರು. ಕನಕನು ಬರುವನು]

ಕನಕ : ಅಯ್ಯಾ! ಪುರಂದರದಾಸರು ಇದ್ದಾರೋ?

ಸೇವಕ : ನೀವು ಯಾರಪ್ಪ?

ಕನಕ : ನಾನು ಕನಕಪ್ಪ.

ಸೇವಕ : ದಾಸರು ಊರಲ್ಲಿ ಇಲ್ಲವಲ್ಲ.

ಕನಕ : ಎಲ್ಲಿಗೆ ಹೋಗಿದ್ದಾರೆ?

ಸೇವಕ : ಉಡುಪಿಗೆ ಹೋಗಿದ್ದಾರೆ.

ಕನಕ : ಸರಿ, ಮತ್ತೆ ಯಾವಾಗ ಬರಬಹುದು?

ಸೇವಕ : ಈದಿನ ಬಂದರೆ ಬಂದಾರು.

ಕನಕ : ನಾನು ಅವರ ದರ್ಶನಕ್ಕಾಗಿ ಬಂದಿದ್ದೆ.

ಸೇವಕ : ಸರಿ ಸರಿ. ಸ್ವಲ್ಪ ಇಲ್ಲೇ ಇದ್ರೆ ಅವರನ್ನು ಕಾಣಬಹುದು. ನನಗೆ ಬೇರೆ ಕೆಲಸವಿದೆ ನಾನು ಹೋಗುತ್ತೇನೆ. (ಹೋಗುವನು)

[ಆಗ ರೂಪಸುಂದರಿಯು ಪೂಜಾದ್ರವ್ಯಗಳಿಂದ ಹಾಡುತ್ತಾ ಪ್ರವೇಶಿಸುವಳು]

[ಅನುಬಂಧ ೧೯]

ಸುಂದರಿ : [ಕನಕನನ್ನು ನೋಡಿ] ತಾವು ಯಾರು?

ಕನಕ : ತಾಯಿ! ನಾನು ಕನಕ.

ಸುಂದರಿ : ಏನು! ನಿಮ್ಮ ಹೆಸರೇ ಕನಕನೇನು?

ಕನಕ : ಅಹುದು.

ಸುಂದರಿ : ಅಂದರೆ ತಾವು ಬಂಗಾರದಂತವರಲ್ಲವೆ?

ಕನಕ : ಅಲ್ಲ, ಹೆಸರುಮಾತ್ರ

ಸುಂದರಿ : ಹೆಸರಿಗೆ ತಕ್ಕಂತೆ ತಾವು ಗುಣವಂತರೆಂದು ನಾನು ಬಲ್ಲೆನು. ತಮ್ಮ ಮಹಿಮೆ, ತಮ್ಮ ತೇಜಸ್ಸು, ಎಲ್ಲರೂ ಕೊಂಡಾಡ....

ಕನಕ : ಅಮ್ಮಾ! ನೀನು ಹೇಳುವಂಥ ದೊಡ್ಡವನಲ್ಲ ನಾನು.

ಸುಂದರಿ : ದೊಡ್ಡವರು ಎಂದಿಗಾದರೂ ದೊಡ್ಡವರೆಂದು ಒಪ್ಪಿಕೊಳ್ಳುವರೋ ಇರಲಿ, ತಾವು ಇಲ್ಲಿಗೆ ಬಂದದ್ದೇಕೆ?

ಕನಕ : ಪುರಂದರದಾಸರ ದರ್ಶನಕ್ಕಾಗಿ.

ಸುಂದರಿ : ಏನು! ದಾಸರ ದರ್ಶನಕ್ಕಾಗಿ. ಅವರು ನಮ್ಮ ಮನೆಯಲ್ಲಿಯೇ ಇದ್ದಾರೆ.

ಕನಕ : ಇಲ್ಲಿಯ ಸೇವಕನು ಊರಿಗೆ ಹೋಗಿದ್ದಾರೆಂದು ಹೇಳಿದ.

ಸುಂದರಿ : ಅವನು ಹೇಳಿದ್ದು ನಿಜ. ಈಗಲೇ ಊರಿನಿಂದ ಬಂದಿದ್ದಾರೆ.

ಕನಕ : (ಆತುರದಿಂದ) ತಾಯಿ! ಅವರ ದರ್ಶನವನ್ನು ಮಾಡಿಸುವಿರಾ?

ಸುಂದರಿ : ಅಗತ್ಯವಾಗಿ. ತಾವು ನನ್ನ ಮನೆಗೆ ಬಂದರೆ ಎಲ್ಲಾ ಅನಾಯಸವಾಗಿ ಆಗುವುದು.

ಕನಕ : ಸಂತೋಷ ಅಮ್ಮಾ! ತಾವು ಯಾರು? ಅವರ ಭಕ್ತರೋ?

ಸುಂದರಿ : ದಾಸರ ದಾಸಾನುದಾಸಿ.

ಕನಕ : ಧನ್ಯಳಮ್ಮಾ! ನೀನು. ಇನ್ನು ಹೊರಡೋಣವೇ?

ಸುಂದರಿ : ದೇವರಿಗೆ ಆರತಿ ಬೆಳಗಿ ಹೋಗೋಣ.

[ಅನುಬಂಧ ೨೦]

[ದೇವರಿಗೆ ಮಂಗಳಾರತಿ ಮಾಡುವಳು]

ಎರಡನೇ ಅಂಕ ಎಂಟನೇ ನೋಟ

## – ಬೀದಿ –

[ರೂಪಸುಂದರಿಯು ಕನಕನು ಬರುವರು]

[ಅನುಬಂಧ ೨೧]

ಕನಕ : ಅಮ್ಮಾ! ತಮ್ಮ ಮನೆ ಇನ್ನೆಷ್ಟು ದೂರವಿದೆ?

ಸುಂದರಿ : ಇನ್ನೇನು ಸಮೀಪಕ್ಕೆ ಬಂದೆವು. ತವುಗೆ ಆಯಾಸವಾಗಿರುವುದೆ?

ಕನಕ : ಇಲ್ಲ ಇಲ್ಲ. ದಾಸರ ದರ್ಶನಕ್ಕೆ ಆಯಾಸವೆಂದರೇನು?

ಸುಂದರಿ : ಅದೇನೋ ನಿಜ, ತಮ್ಮಂತಹವರ ಜತೆಯಲ್ಲಿ ಬರಲು ನನಗೂ ಆಯಾಸವೆನಿಸುವುದಿಲ್ಲ. ಆದರೆ....

ಕನಕ : ಆದರೇನಮ್ಮಾ!

ಸುಂದರಿ : ಒಂದು ವಿಷಯ ತಮ್ಮನ್ನು ಕೇಳಬೇಕೆಂದಿದ್ದೇನೆ.

ಕನಕ : ಅನುಮಾನವೇಕೆ, ಕೇಳಬಹುದಲ್ಲ.

ಸುಂದರಿ : ಈಗ ತಮ್ಮನ್ನು ನೋಡಿ ಜನರು ನಿಂದಿಸಬಹುದಲ್ಲ.

ಕನಕ : ಏತಕ್ಕಾಗಿ?

ಸುಂದರಿ : ತಾವು ನನ್ನ ಜೊತೆಯಲ್ಲಿ ನಡೆಯುವುದಕ್ಕಾಗಿ.

ಕನಕ : ಇದರಲ್ಲಿ ದೋಷವೇನು?

ಸುಂದರಿ : ಅಂತಹ ದೋಷವೇನೂ ಇಲ್ಲ. ಇದು ಎಲ್ಲರೂ ಆಚರಿಸುವ ಆಚಾರವೇ?

ಕನಕ : ಅಂದಮೇಲೆ, ಜನರಾಡುವ ನುಡಿಗೆ ಅಂಜಲೇಕೆ?

ಸುಂದರಿ : ತಾವಿದ್ದ ಮೇಲೆ ನನಗೆ ಅಂಜಿಕೆಯೇ ಅದೇನೂ ಇಲ್ಲ, ಹೆಣ್ಣಿನ ಜೊತೆಯಲ್ಲಿ ಗಂಡುಕೂಡಿದರೆ ಇಲ್ಲದ ದೋಷ ಕೊಡುವುದು ಜನರ ಸ್ವಭಾವ.

ಕನಕ : ಜನರ ಸ್ವಭಾವದಿಂದ ನಮಗೇನಾಗಬೇಕಾಗಿದೆ. ಮನಸ್ವಭಾವವನ್ನು ತಿಳಿದುಕೊಂಡರೆ ಸಾಕು.

ಸುಂದರಿ : ಅದು ನಿಜ. ಆದರೆ ನಮ್ಮ ಸಮಾಜ ಹೆಣ್ಣನ್ನು ಅತಿಹೇಯವೆಂದು ಭಾವಿಸಿದೆ.

ಕನಕ : ಅಮ್ಮಾ! ಹೆಣ್ಣು ಹೇಯವೇನು ಗಂಡು ಶ್ರೇಯವೇನು. ಎರಡೂ ಒಂದೇ. ಹೇಯವೆಂಬುದೇ ಪ್ರಪಂಚದಲ್ಲಿಲ್ಲ.

[ಅನುಬಂಧ ೨೨]

[ಎಂದು ಹಾಡುತ್ತಾ ಹೋಗುವರು]

ಎರಡನೇ ಅಂಕ ಒಂಬತ್ತನೇ ನೋಟ

## – ರೂಪಸುಂದರಿಯ ಶಯ್ಯಾಗೃಹ –

ಕನಕನು ಆಕಡೆ ನೋಡುತ್ತಾ ಒಬ್ಬನೇ ಚಾಪೆಯ ಮೇಲೆ ಕುಳಿತಿರುವನು. ಪಕ್ಕದಲ್ಲಿ ಶೃಂಗರಿಸಲ್ಪಟ್ಟ ಮಂಚ ಅದರ ಸಮೀಪದ ಗದ್ದುಗೆಯ ಮೇಲೆ ಸುಗಂಧ ದ್ರವ್ಯಗಳು, ಶೃಂಗಾರ ಚಿತ್ರ ಪಟಗಳು ಗೋಡೆಯ ಸುತ್ತಲು ಕಂಗೊಳಿಸುತ್ತಿವೆ.

[ಅನುಬಂಧ ೨೩]

ಕನಕ : (ಯೋಚಿಸುತ್ತಾ) ಇಲ್ಲಿಯೇ ಇರುವಂತೆ ಹೇಳಿಹೋದ ಆ ತಾಯಿ ಇನ್ನೂ ಬರಲಿಲ್ಲವಲ್ಲ. ಮಹಾತ್ಮರಾದ ದಾಸರ ದರ್ಶನಕ್ಕೆ ನನ್ನ ಮನವು ಆತುರಗೊಳ್ಳುವುದು.

[ಒಯ್ಯಾರದಿಂದ ರೂಪಸುಂದರಿಯು ಬರುವಳು]

[ಅನುಬಂಧ ೨೪]

ಸುಂದರಿ : ಕ್ಷಮಿಸಬೇಕು. ಪಾಪ! ಒಬ್ಬೊಂಟಿಗರಾಗಿರಲು ತಮಗೆ ಬೇಸರವಾಯಿತೇನೋ.

ಕನಕ : ಬೇಸರವೇಕೆ. ನಾನು ಯಾವಾಗಲೂ ಒಬ್ಬೊಂಟಿಗನೇ.

ಸುಂದರಿ : ಅಯ್ಯೋ! ಹಾಗೇನು ತಮ್ಮ ಮನರಂಜಕರು ಯಾರೂ ಇಲ್ಲವೇ?

ಕನಕ : ಮನರಂಜಕರೆಂದರೆ?

ಸುಂದರಿ : ಹೆಂಡತಿ.... ಮತ್ತು.... ಹೀಗೆ....

ಕನಕ : ಇಲ್ಲ ತಾಯಿ ಯಾರೂ ಇಲ್ಲ.

ಸುಂದರಿ : ಹಾಗಾದರೆ ಮತ್ತಷ್ಟು ಅನುಕೂಲವೇ ಆಯಿತು.

ಕನಕ : ಅಮ್ಮಾ! ಈ ಚರ್ಚೆ ಏತಕ್ಕೆ ದಾಸರೆಲ್ಲಿ?

ಸುಂದರಿ : ಇಲ್ಲೇ ಇದ್ದಾರಲ್ಲ.

| | | |
|---|---|---|
| ಕನಕ | : | ಎಲ್ಲಿ? |
| ಸುಂದರಿ | : | ನನ್ನೆದಿರಿಗೇ ಇದ್ದಾರಲ್ಲ. ಅವರ ಪಾದದಾಸಿ ಸೇವೆಗೆ ಸಿದ್ಧಳಾಗಿ ಬಳಿಯಲ್ಲೇ ಕುಳಿತಿರುವಳಲ್ಲಾ. |
| ಕನಕ | : | ಅಮ್ಮಾ! ಈ ಪರಿಹಾಸವು ಬೇಡ. ದಾಸರ ದರ್ಶನಕ್ಕಾಗಿ ಈ ಮನವು ಆತುರಗೊಳ್ಳುವುದು. |
| ಸುಂದರಿ | : | ಹೀಗೇನು. ದಾಸಿಯ ಸೇವೆಯನ್ನು ಕೂಡಾ ಸ್ವೀಕರಿಸಲು ಮನವು ಆತುರಗೊಳ್ಳುವುದು. |
| ಕನಕ | : | ಇಲ್ಲ. ಪರರಿಗೆ ಸೇವೆ ಸಲ್ಲಿಸಲು ಅರ್ಹನಲ್ಲದೆ ಅವರಿಂದ ಸೇವೆ ಹೊಂದಲು ಅರ್ಹನಲ್ಲ. |
| ಸುಂದರಿ | : | ಈ ದಾಸಿ ತಮ್ಮ ಸೇವೆಗೆ ಸಿದ್ಧಳಾಗಿರುವಾಗ ತಾವು ಹೀಗೆನ್ನಬಾರದು. |
| ಕನಕ | : | ತಾಯಿ! ಪುರಂದರದಾಸರ ದರ್ಶನಕ್ಕೆಂದು ಕರೆತಂದು ಹೀಗೆ ಮಾತನಾಡುವುದು ನಿಮಗೆ ಒಪ್ಪುವುದೆ? |
| ಸುಂದರಿ | : | ತಮಗೆ ಬಹಿರಂಗದಲ್ಲಿ ಹಾಗೆ ಹೇಳಿದ್ದರೂ, ಅಂತರಂಗದಲ್ಲಿ ಮಾತ್ರ ತಮ್ಮನ್ನೇ ದಾಸರೆಂದು ತಿಳಿದು ಕರೆತಂದೆನು. |
| ಕನಕ | : | ಅಮ್ಮಾ! ಹೀಗೆ ಸುಳ್ಳು ಹೇಳಿ, ವಂಚಿಸುವುದರಿಂದ ತಮಗಾಗುವ ಪ್ರಯೋಜನವೇನು? |
| ಸುಂದರಿ | : | ಪ್ರಯೋಜನವಿಲ್ಲದೆ ಯಾರು ಸುಳ್ಳು ಹೇಳುವರು. |
| ಕನಕ | : | ಈಗ ನಿನಗಾಗುವ ಪ್ರಯೋಜನವೇನು? |
| ಸುಂದರಿ | : | ನಿಮ್ಮಂತಹ ರಸಿಕರು ದೊರೆತಾಗ ಪ್ರಯೋಜನವಿಲ್ಲದೆ ಇರುವುದುಂಟೆ. |
| ಕನಕ | : | ತಾಯಿ! ನಿಮ್ಮದು ತಪ್ಪು ಭಾವನೆ. ನಾನು ರಸಿಕನಲ್ಲ. |
| ಸುಂದರಿ | : | ಇರಬಹುದು. ರಸಿಕವಸ್ತುವು ದೂರವಾಗಿದ್ದಾಗ. |
| ಕನಕ | : | ಅಮ್ಮಾ! ಈ ಪ್ರಸಂಗವು ಸಾಕು. |
| ಸುಂದರಿ | : | ಹೋಗಲಿ ಒಂದು ಕೀರ್ತನೆಯಾದರೂ ಕೇಳಿರಿ. (ಹಾಡುವಳು) |

[ಅನುಬಂಧ ೨೫]

ಕನಕ : ಛೀ ಛೀ ಇದೇನು ಕೀರ್ತನೆ.

ಸುಂದರಿ : ಹೋಗಲಿ, ಮತ್ತೊಂದು ಹಾಡುತ್ತೇನೆ (ಹಾಡುವಳು).

ಕನಕ : ಅಮ್ಮಾ! ನಾನು ಬರಲೇ? (ಏಳುವನು)

ಸುಂದರಿ : ಇದೇನು! ಎಲ್ಲಿಗೆ? ಸಂಗೀತವು ತಮಗೆ ಬೇಸರವಾಯಿತೇನು?

ಕನಕ : ಇಲ್ಲ. ಆ ಸಂಗೀತದಲ್ಲಿ ಜೊತೆಗೂಡಿದ ಭಾವವು ನನಗೆ ಬೇಸರವಾಗಿದೆ. ತಿಳಿಯದೆ ಇಲ್ಲಿಗೆ ಬಂದೆ ಹೊತ್ತಾಯಿತು. ಬರುವೆನು.

ಸುಂದರಿ : ಪ್ರಿಯಳನ್ನು ಮರುಳುಗೊಳಿಸಿ ನಿರಾಕರಿಸಿ ಹೋಗುವುದುಂಟೆ.

ಕನಕ : ನಿನ್ನ ಮರುಳುತನಕ್ಕೆ ನಾನು ಕಾರಣನೆ?

ಸುಂದರಿ : ಅಲ್ಲ ಅಲ್ಲ ತಮ್ಮ ಸುಂದರರೂಪ.

ಕನಕ : ಅಂದಮೇಲೆ ನನ್ನ ಅಪರಾಧವೇನು?

ಸುಂದರಿ : ಛೆ ಛೆ! ತಮ್ಮ ಅಪರಾಧವೇನೂ ಇಲ್ಲ. ಅಪರಾಧವೆಲ್ಲವೂ ಆ ಮನ್ಮಥನದೆ. ಅವನನ್ನು ದಂಡಿಸಲು ತಾವು ಸಹಾಯಕರಾದರೆ....

ಕನಕ : ತಂಗೀ, ಇದು ಪಾಪದ ಬಯಕೆ.

ಸುಂದರಿ : ಅಲ್ಲ, ಇದು ಸುಖದ ಬಯಕೆ.

ಕನಕ : ಅಮ್ಮಾ! ಪಾಪವೇ ಸುಖವೆಂದು ತಿಳಿಯುವ ನಿನ್ನ ಅಜ್ಞಾನಕ್ಕೆ ನನಗೆ ವಿಷಾದವೆನಿಸುತ್ತದೆ.

ಸುಂದರಿ : ಇರಲಿ ತಾನಾಗಿ ಒಲಿದು ಬಂದವಳನ್ನು ತಿರಸ್ಕರಿಸಿದರೆ ಅವಳ ಮನವು ವಿಷಾದಗೊಳ್ಳುವುದಿಲ್ಲವೇ?

ಕನಕ : ಸ್ತ್ರೀಯರಿಗೆ ಸಹಜವಾದ ನಾಚಿಕೆಯನ್ನು ಬಿಟ್ಟು, ಸಮ್ಮತಿಸದ ಪುರುಷನನ್ನು ಬಲವಂತಪಡಿಸುವುದೆ.

ಸುಂದರಿ : ಅಯ್ಯೋ! ಬಲವಂತವಲ್ಲ. ತಮ್ಮ ಮೇಲಿರುವ ಅವ್ಯಾಜ ಪ್ರೇಮ.

ಕನಕ : (ನಕ್ಕು) ಅವ್ಯಾಜಪ್ರೇಮ. ಹುಚ್ಚುತಾಯಿ. ಈ ಅವ್ಯಾಜ ಪ್ರೇಮವನ್ನೇ ಭಗವಂತನಲ್ಲಿರಿಸಿದರೆ ನಿನಗೆ ಸದ್ಗತಿ ದೊರೆಯಬಹುದಲ್ಲ.

[ಅನುಬಂಧ 26]

ಸುಂದರಿ : ನನಗೆ ಯಾವ ಗತಿಯೂ ಬೇಡ ತಾವು ಒಲಿದರೆ ಸಾಕು.

ಕನಕ : ಅಮ್ಮಾ! ಇನ್ನು ಸಾಕುಮಾಡು ನಿನ್ನ ನುಡಿ ಕೇಳಲಾರೆ (ಎಂದು ಹೋಗಲು ಪ್ರಯತ್ನಿಸುವನು, ಸುಂದರಿಯು ಅಡ್ಡ ಬಂದು)

ಸುಂದರಿ : ನೀವು ಏನಂದರೂ ನಿಮ್ಮನ್ನು ಮಾತ್ರ ಬಿಡಲಾರೆ.

ಕನಕ : ಇದು ಕನಕನ ಪರೀಕ್ಷೆ. ಜಗತ್ತಿನ ಸ್ತ್ರೀಯರೆಲ್ಲರನ್ನು ತಾಯಿಯೆಂದು ಭಾವಿಸುವ ಸಮಯ. ನನ್ನ ತಾಯಿಗೆ ಕೊಟ್ಟ ಭಾಷೆಯನ್ನು ನೆರವೇರಿಸುವ ದಿನ ಅಹುದು. ಈ ವಿಧ'ದಿಂದ ನನ್ನ ತಾಯಿ ಮಗನ ಪರೀಕ್ಷೆ ಮಾಡುತ್ತಿರಬಹುದು. ಅಮ್ಮಾ! ಅಮ್ಮಾ! ಅರಿಯದ ಮಗನನ್ನು ಇಷ್ಟು ಪರೀಕ್ಷಿಸುವರೆ. ಅಮ್ಮಾ! ನಿನ್ನ ಮಗುವನ್ನು ಆಶೀರ್ವದಿಸು. (ಎಂದು ಸುಂದರಿಯ ಕಾಲಿಗೆ ಸಾಷ್ಟಾಂಗವೆರಗುವನು – ಆಗ ಪುರಂದರದಾಸರು ಬರುವರು)

ಪು.ದಾಸ : ಕನಕಾ! ಯೋಗೇಶ್ವರರಿಗೂ ಅಸಾಧ್ಯವಾದ ಕಾಮದ ಬಲೆಯನ್ನು ಭೇದಿಸಿ ಪವಿತ್ರನಾದೆ. "ಕನಕದಾಸ"ನೆಂದು ನಿನ್ನ ನಾಮವು ಜಗತ್ತಿನಲ್ಲಿ ಚಿರಂಜೀವಿಯಾಗಿರಲಿ.

ರೂಪಸುಂದರಿ : ಮಹನೀಯಾ! ನಾನು ಪಾಪಿ ನಿಮ್ಮ ಶಪಥವನ್ನು ಭಂಗಪಡಿಸಲು ಬಂದ ರೋಹಿಣಿ ನಾನು. ನಿಮ್ಮ ಶೀಲದ ತೇಜಸ್ಸಿಗೆ ದೈವಭಕ್ತಿಗೆ ಸೋತು ಶರಣಾಗತಳಾದೆ. ದಿಕ್ಕಿಲ್ಲದ ಈ ಹೆಣ್ಣಿನ ಸರ್ವಾಪರಾಧಗಳನ್ನು ಕ್ಷಮಿಸಬೇಕು. ನಿಮ್ಮ ಪಾದಸೇವೆಯ ದಾಸಿಯಾಗಿ ಸ್ವೀಕರಿಸಿ ಉದ್ಧರಿಸಬೇಕು.

ಕನಕ : (ಆಶ್ಚರ್ಯದಿಂದ) ರೋಹಿಣಿ. ಅಂದಿನದು ಅಂದಿಗೇ ಮುಗಿಯಿತೆಂದುಕೊಂಡಿದ್ದೆ. ಎಷ್ಟು ಧೈರ್ಯ? ಎಂತಹ ಕೆಚ್ಚು? ಆದರೆ ಅದೆಲ್ಲಾ ವ್ಯರ್ಥ. ತಂಗಿ ಅಲಭ್ಯವಾದ ವಸ್ತುವಿಗೆ ಲಭ್ಯವಾದ ಯೌವನದ ಸುಖವನ್ನು ಕಳೆದುಕೊಂಡು ದುಃಖಕ್ಕೀಡಾದೆಯಲ್ಲಾ. ಆದದ್ದಾಯಿತು

ನಾವಿಬ್ಬರೂ ಈ ಪುರಂದರದಾಸರ ಅನುಗ್ರಹದಿಂದ ಉದ್ಧಾರವಾಗುವ.

ಪು.ದಾಸ : ಅಮ್ಮಾ! ನಿನ್ನ ಪಾಪಗಳು ಈ ಮಹಾತ್ಮನಿಂದ ಹಾಗೂ ನಿನ್ನ ಪಶ್ಚಾತ್ತಾಪದಿಂದ ದೂರವಾದವು. ಈತನೇ ನಿನ್ನ ಗುರುವೆಂದು ಭಾವಿಸು. ನಿನಗೆ ದೇವರು ಅಖಂಡಾನಂದವನ್ನು ಕರುಣಿಸಲಿ.

[ಅನುಬಂಧ ೨೬]

[ತೆರೆ]

ಮೂರನೇ ಅಂಕ ಒಂದನೇ ನೋಟ

## – ಬೀದಿ –

[ವಿಚಾರದಿಂದ ಭೀಮಾಚಾರ್ಯ, ಗೋವಿಂದಾಚಾರ್ಯ ಬರುವರು]

ಭೀಮಾ : ಏನಾದಂತಾಯಿತೋ ಶ್ರೀಹರೀೀೀ

ಗೋವಿ : ಕೈಕೊಟ್ಟಳಲ್ರೀ ಸುಂದರೀೀೀ

ಭೀಮಾ : ಕೊಟ್ಟಳಪ್ಪಾ ಕೊಟ್ಲು. ಈಗ ಯಾರನ್ನಂದು ಏನು ಪ್ರಯೋಜನ. ಆ ಶ್ರೀಹರಿಯೇ ಅವನ ಪಕ್ಷವಿದ್ದಾನಲ್ರೀ.

ಗೋವಿ : ಹೌದು ಹೌದು ಇದ್ದಾನೆ. ಆದರೆ ಈ ಶ್ರೀಹರಿಯಾದರೂ ನಮ್ಮ ಪಕ್ಷಕಿದ್ದಾಳೆಂದು ನಂಬಿದ್ದೆವು.

ಭೀಮಾ : ಈ ಶ್ರೀಹರಿ! ಅಂದರೆ?

ಗೋವಿ : ಶ್ರೀ ಎಂದರೆ ಸಂಪತ್ತು, ಸಂಪತ್ತು ಅಂದರೆ ಧನ. ಹರಿ ಎಂದರೆ ಹರಣ–ಅಪಹಾರ, ಶ್ರೀಹರಿ ಎಂದರೆ ಧನಾಪಹಾರಿ....

ಭೀಮಾ : ಅಯ್ಯೋ ಹರಿಹರೀ ನಿಮ್ಮ ಪಾಂಡಿತ್ಯಕ್ಕೆ ಬೆಂಕಿಹಾಕ್ಲಿ. ಅಲ್ರಿ ಇಷ್ಟೆಲ್ಲಾ ಆದ ಅನರ್ಥದಲ್ಲಿ ಕೆಲಸಕ್ಕೆ ಬಾರದ ಅನರ್ಥ ಕೋಶವನ್ನು ಕೆದರುತ್ತೀರಲ್ರಿ, ಕೆಲಸವಿಲ್ಲದ ಕೋಳಿಯ ಕಾಲು ತಿಪ್ಪೆ ಕೆದರಿದಂತೆ....

ಗೋವಿ : ಹೌದು ಹೌದು. ನಿಮ್ಮ ಉಪಮೆ ಮಹೋತ್ತಮವಾದುದು ವಿದ್ವಾಂಸರ ತಲೆ ನೇರವಾಗಿ ಓಡೋದಿಲ್ಲ. ಏನೇನೋ ವಿಷಯಾಂತರದ ಅಡ್ಡ ಹಾದಿಗಿಳಿಯುತ್ತೆ. ಸಿಟ್ಟಾಗಬೇಡ್ರಿ ಆಚಾರ್ರೆ ಈಗೇನು ಮಾಡಬೇಕೂಂತ.

ಭೀಮಾ : ಏನಿದೆಯಪ್ಪಾ ಮಾಡೋದು ಮಾಡಿದ್ದೆಲ್ಲಾ ಹೀಗಾಯಿತು.

ಗೋವಿ : ಹೀಗಾಯಿತೂಂತ ಮಾಡೋದು ಬಿಡತಾರೇನ್ರಿ ಬುದ್ಧಿವಂತರು.

ಭೀಮಾ : ಆ ಕನಕದಾಸನ ಮುಂದೆ ನಮ್ಮ ಬುದ್ಧಿ ಏನು ನಡೆಯುವಂತಿಲ್ಲ. ಆಚಾರ್‍ರೆ ನನಗೇಕೋ ಅನುಮಾನ ಒಂದು ದಿನ, ಆ ಕರುಬ ನಮ್ಮನ್ನೇ ವಶಪಡಿಸಿಕೊಳ್ಳುತ್ತಾನೆಂತ ಅಂಜಿಕೆಯಾಗುತ್ತೆ.

ಗೋವಿ : ಅಂಜಿಕೆ ಯಾಕ್ರಿ, ಅವನೇನು ಹುಲೀನೋ ಕರಡೀನೋ?

ಭೀಮಾ : ಆಚಾರ್‍ರೆ ನಿಮಗೆ ಗೊತ್ತಿಲ್ಲ, ಅವನಿಗೆ ವಶೀಕರಣ ವಿದ್ಯೆ ಗೊತ್ತಿದೆ.

ಗೋವಿ : ಎಲ್ಲಿಯ ವಶೀಕರಣ ಬಿಡ್ರಿ, ಹಾಗಿದ್ರೆ ಅದನ್ನು ನಮ್ಮ ಮೇಲೆಯೇ ಪ್ರಯೋಗಿಸುತ್ತಾ ಇದ್ದ. ಇದು ವಶೀಕರಣ ಅಲ್ಲಗಿಸೀಕರಣ ಅಲ್ಲ. ಇದೊಂದು ಊ (ಭೀಮಾಚಾರ್ಯ ಸಿಟ್ಟಿನಿಂದ ನೋಡಲು) ಇದು.

ಭೀಮಾ : ಇದು ಏನ್ರಿ ಅದು?

ಗೋವಿ : ಇದೆ ಇದೆರೀ ಸ್ವಲ್ಪ ತಲೆ ಓಡಿಸಬೇಕು.

ಭೀಮಾ : ಎಲ್ಲಿಗೆ?

ಗೋವಿ : ಅಯ್ಯೋ ತಲೆ ಓಡಿಸೋದಂದ್ರೆ ತಲೇನೇ ಓಡಿಸೋದಲ್ರೀ ಯಾಕೋ ನಿಮಗೆ ಭ್ರಮಣೆಯಾದಂತಿದೆ. ಇಲ್ಲಿ ನೋಡ್ರಿ ಆ ಮೋಹನ.

ಭೀಮಾ : ಮೋಹನ. ಏನು ಮೋಹನ.

ಗೋವಿ : ಅವನ್ರಿ ಆ ರತ್ನಮಂಜರಿಯ ಸಮ್ಮಂಧ ಆ ಮೋಹನ ರೂಪಸುಂದರಿಯ ಮೋಹ ಜಾಲದಲ್ಲಿ ಸಿಕ್ಕಿಕೊಂಡಿದ್ದಾನೆ. ಈಗವಳು ಕುರುಬನ ಕಂಬಳಿಯಲ್ಲಿ ಸಿಕ್ಕಿಕೊಂಡದ್ದನ್ನು ಕೊಂಚ ಉಪ್ಪು ಕಾರ ಹಚ್ಚಿ ಹೇಳಿದರೆ ಸಾಕು ಕೆಂಡದಂತಾಗಿ ಆ ಕುರುಬನ ಮೇಲೆ ಬೀಳುತ್ತಾನೆ. ಇದೆಲ್ಲಾ ರಾದ್ಧಾಂತ ಶ್ರೀಮಠಕ್ಕೆ ಅರಿಕೆಯಾದರೆ ಮಹಾಸ್ವಾಮಿಗಳು ಅವನ ನಾಮ ಕೆತ್ತಿಸಿ ಕತ್ತು ಹಿಡಿದು ನೂಕಿಸುತ್ತಾರೆ.

ಭೀಮಾ : ಭೇಷ್ ಭೇಷ್, ನಿಮ್ಮ ತಲೆಯೇ ಬೆಲೆಯಿಲ್ಲದ ತಲೆ. ಅಪಾಯದಲ್ಲಿ ಎಂಥಾ ಉಪಾಯ ಹುಡುಕಿದಿರಿ ಆಚಾರ್‍ರೆ! ಈ ಕ್ಷಣದಲ್ಲಿಯೇ ಈ ಉಪಾಯ ಕಾರ್ಯರೂಪಕ್ಕೆ ತಿಳಿಯಬೇಕು.

ಗೋವಿ : ಇಳಿದೇ ತೀರಬೇಕು. ಈ ಕಾರ್ಯದಿಂದ ನಮಗೆ ಮೋಸಮಾಡಿದ ರೂಪಸುಂದರಿಗೂ ತಕ್ಕ ಪ್ರಾಯಶ್ಚಿತ್ತವಾಗಬೇಕು.

ಭೀಮಾ : ಅಹುದೂಂದೆ ಒಂದೇ ಏಟಿಗೆ ಎರಡು ಬೇಟೆ. ನಡೆಯಿರಿ ಹೋಗುವ.

[ಎಂದು ನಗುತ್ತ ಹೋಗುವರು.]

## ಮೂರನೇ ಅಂಕ ಎರಡನೇ ನೋಟ

ರೂಪಸುಂದರಿ, ಕನಕದಾಸ ಮತ್ತು ಇತರ ಹುಡುಗರು ಕುಳಿತಿರುವರು. ಮಧ್ಯವೇದಿಕೆಯ ಮೇಲೆ ಶ್ರೀಕೃಷ್ಣನ ವಿಗ್ರಹವಿರುವುದು. ಎಲ್ಲರೂ ಭಜನೆಯನ್ನು ಮಾಡುತ್ತಿರುವರು. ಆಗ ರೂಪಸುಂದರಿಯ ಪೂರ್ವ ಸ್ನೇಹಿತ ಮೋಹನನು ಬರುವನು ಸುಂದರಿಯು ನೋಡಿ ಗಾಬರಿಯಾಗುವಳು.

[ಅನುಬಂಧ ೨೮]

ಕನಕ : ತಾವು ಯಾರು?

ಮೋಹನ : ನಾನು ಒಬ್ಬ ಮನುಷ್ಯ.

ಕನಕ : ಅದು ನಿಜ. ಅದರೆ ತಮ್ಮ ಹೆಸರೇನು?

ಮೋಹನ : ನನ್ನ ಹೆಸರಿನಿಂದ ನಿನಗಾಗುವ ಲಾಭವೇನು?

ಕನಕ : ಹೇಳುವುದರಿಂದ ತಮಗಾಗುವ ನಷ್ಟವೇನು?

ಮೋಹನ : ಈಗಾಗಿರುವ ನಷ್ಟವು ಸಾಲದೆ?

ಕನಕ : ಏನು ನಷ್ಟ?

ಮೋಹನ : ಮಾನನಷ್ಟ.

ಕನಕ : ಯಾರಿಂದ?

ಮೋಹನ : ನಿನ್ನಿಂದ?

ಕನಕ : ತಮಗೆ ಅಪರಿಚಿತನಾದ ನನ್ನಿಂದಲೇ?

ಮೋಹನ : ಅಹುದು.

ಕನಕ : ಅದು ಹೇಗೆ?

ಮೋಹನ : ಕಳ್ಳ ಕನಕಾ! ಅರಿಯದವನಂತೆ ನಟನೆ ಮಾಡಿದ ಮಾತ್ರಕ್ಕೆ ನಿನ್ನ ರಹಸ್ಯ ನಾಟಕವು ಪ್ರಪಂಚಕ್ಕೆ ಗೊತ್ತಿಲ್ಲವೆಂದು ತಿಳಿದಿರುವೆಯಾ?

ಕನಕ : ಅಂತಯ್ಯಾ! ನನಗೆ ತಿಳಿಯುವಂತೆ ವಿಚಿತ್ರವಾಗಿ ಮಾತನಾಡುವಿರಲ್ಲಾ! ರಹಸ್ಯವೇನು? ನಾಟಕವೇನು?

ಮೋಹನ : ಈ ಸುಂದರಿಯನ್ನು ಮೋಸದಿಂದ ವಶಪಡಿಸಿಕೊಂಡು ಬಹಿರಂಗದಲ್ಲಿ ದಾಸನ ಸೋಗು ಹಾಕಿ ವೇದಾಂತವನ್ನು ಬೋಧಿಸುವುದು ನಾಟಕವಲ್ಲವೆ?

ಕನಕ : ಶಾಂತಂ ಪಾಪಂ (ಕಿವಿ ಮುಚ್ಚಿಕೊಳ್ಳುವನು).

ಸುಂದರಿ : ಮಹಾತ್ಮರಲ್ಲಿ ದೋಷವನ್ನು ಕಲ್ಪಿಸುವುದು ನ್ಯಾಯವಲ್ಲ.

ಮೋಹನ : ಮುಚ್ಚು ಬಾಯಿ! ವಂಚಕಿಯಾದ ನೀನು ನ್ಯಾಯಾನ್ಯಾಯಗಳನ್ನು ಕಲ್ಪಿಸಿಕೊಡುವೆಯಾ?

ಸುಂದರಿ : ನಾನು ಯಾರನ್ನೂ ವಂಚಿಸಿಲ್ಲ.

ಮೋಹನ : ದೇವರುಕೊಟ್ಟ ನಾಲಗೆಯಿಂದ.

ಮೋಹನ : ಓಹೋ, ಈ ಚಮತ್ಕಾರವನ್ನು ಈ ಕಪಟದಾಸನಿಂದ ಕಲಿತೆಯೋ?

ಸುಂದರಿ : ಅವರು ಕಪಟದಾಸರಲ್ಲ.

ಮೋಹನ : ಅಹುದು. ನಾನೇ ಕಪಟ. ನಿನ್ನೊಲುಮೆಗಾಗಿ ರತ್ನಮಂಜರಿಯ ಬಣ್ಣದ ಮಾತಿಗೆ ನನ್ನಲ್ಲಿ ಹಣವಿರುವವರೆಗೂ. ಇದ್ದ ಧನವನ್ನು ಕಳೆದುಕೊಂಡೆ ಈಗ ಗರತಿಯಂತೆ ನಟಿಸಿ ಕಡೆಗೆ ಈ ಕಪಟ ಸನ್ಯಾಸಿಯನ್ನು ಕೂಡಿ ನಿನ್ನ ನೀಚತನವನ್ನು ಬಹಿರಂಗಪಡಿಸಿದೆ.

ಸುಂದರಿ : ನಿನ್ನ ಮೋಹಭ್ರಾಂತಿಯ ಅವಿವೇಕತನಕ್ಕೆ ನಾನು ಕಾರಣಳಲ್ಲ. ಕಾರಣಾಂತರದಿಂದ ವೇಶ್ಯೆಯಂತೆ ಅಭಿನಯಿಸಿದೆನಲ್ಲದೆ ನಾನು ವೇಶ್ಯೆಯಲ್ಲ. ನಾನು ಯಾರೆಂದು ನಿನಗೆ ಹೇಳುವ ಅಗತ್ಯವು ಇಲ್ಲ. ನಿನ್ನ ನೀಚತನಕ್ಕೆ ನೀನೇ ಗುರಿ.

ಮೋಹನ : ಭೇಷ್, ಬೃಹತ್ಕಥಾಮಂಜರಿ, ನಿಮ್ಮಂಥವರಿಂದಲೇ ಹುಟ್ಟಿದ್ದು ಆಕಾಶಕ್ಕೆ ಹಾರಿದರೂ, ಪಾತಾಳಕ್ಕಿಳಿದರೂ ಪಾತರದವರ ನೆಲೆ ಸಿಕ್ಕೀತೆ.

ಕನಕ : ಅಯ್ಯಾ! ತಮ್ಮದು ಕೇವಲ ತಪ್ಪು ತಿಳುವಳಿಕೆ.

ಮೋಹನ : ಏನು. ಇಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಿದ್ದರೂ ನನ್ನದು ತಪ್ಪು ತಿಳುವಳಿಕೆಯೇ?

ಕನಕ : ಅಯ್ಯಾ! ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕು.

ಮೋಹನ : ನೋಡಿದಂತೆಯೇ ಇದೆ ನಿನ್ನ ಆಟ.

ಕನಕ : ಅಯ್ಯಾ! ನಿನ್ನ ಅಂತರಂಗದಾಟವನ್ನು ನೀನು ನೋಡದೆ ಮಾತನಾಡುವಿ ಎಂದಮೇಲೆ ಇನ್ನು ಅನ್ಯರ ಅಂತರಂಗದಾಟವನ್ನು ನೋಡುವುದಾದರೂ ಹೇಗೆ?

ಮೋಹನ : ಅದೆಲ್ಲಾ ಇರಲಿ. ನಿಜವಾದ ದಾಸರು ವೇಶ್ಯೆಯ ಸಹವಾಸದಲ್ಲಿರುವರೆ?

ಕನಕ : ಇಲ್ಲ.

ಮೋಹನ : ಅಂದಮೇಲೆ ಈಗ ಇವಳ ಸಹವಾಸದಲ್ಲಿರುವ ನಿನ್ನನ್ನು ಏನೆಂದು ಕರೆಯಬೇಕು?

ಕನಕ : ಏನೆಂದಾದರೂ ಕರೆಯಬಹುದು. ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಆದರೆ ಈಕೆಯು ಮಾತ್ರ ಪರಿಶುದ್ಧಳು.

ಮೋಹನ : ಏನು ಪಾತಕಿಯಾದ ವೇಶ್ಯೆಯು ಪರಿಶುದ್ಧಳೇ?

ಕನಕ : ವೇಶ್ಯೆಯರು ಪಾತಕಿಗಳಲ್ಲ. ಪಾತಕಿಗಳೆಂದು ಬಹಿರಂಗದಲ್ಲಿ ದೂಷಿಸಿ ರಹಸ್ಯದಿಂದ ಅವರ ಸಂಗವನ್ನು ಬಯಸುವವರು ಪಾತಕಿಗಳು.

ಮೋಹನ : ಅಂತಹ ಪಾತಕಿಯು ನಾನೇ ಎಂದು ಹೇಳುವೆಯಾ?

ಕನಕ : ಯಾರು ಹೇಳುವುದೇನು? ನಿನ್ನ ಅಂತರಾತ್ಮನೇ ನಿನಗೆ ಹೇಳುತ್ತಿರುವುದು. ನೀನು ಇಂದ್ರಿಯಗಳ ಚಾಪಲ್ಯಕ್ಕೆ ಒಳಗಾದ್ದರಿಂದ ಅದರ ಕಡೆಗೆ ನಿರ್ಲಕ್ಷವನ್ನು ತೋರಿದೆ.

ಮೋಹನ : ಮನುಷ್ಯನು ದುರ್ಗುಣಗಳಿಗೆ ವಶನಾಗದೆ ಇರಲು ಸಾಧ್ಯವೇ?

ಕನಕ : ಏತಕ್ಕೆ ಸಾಧ್ಯವಲ್ಲ. ದುರ್ಗುಣಗಳಿಂದ ಕೂಡಿದ ಮಾನವನು ಅದೇ ದುರ್ಗುಣಗಳನ್ನು ದೂರಮಾಡಿದರೆ ದೇವನಾಗುವನು. ಇದೇ ಅವನಿಗೂ ಮಾನವನಿಗೂ ಇರುವ ವ್ಯತ್ಯಾಸ.

[ಅನುಬಂಧ ೨೯]

ಮೋಹನ : (ಪಶ್ಚಾತ್ತಾಪದಿಂದ) ನಿಜ. ವಿವೇಕವಿಲ್ಲದೆ ಸತ್ಸಹವಾಸ ದೊರೆಯದೆ ಇದುವರೆಗೂ ಅಜ್ಞಾನದಿಂದ ವರ್ತಿಸಿದೆ. ಮಹಾತ್ಮರಾದ ತಮ್ಮನ್ನು ದೂಷಿಸಿದೆ. ಈ ಪಾಪಿಯನ್ನು ಕ್ಷಮಿಸಬೇಕು (ಎಂದು ಸಾಷ್ಟಾಂಗವೆರಗುವನು).

ಕನಕ : ಏಳು, ನಿನ್ನನ್ನು ನೀನು ತಿಳಿದುಕೊಂಡದ್ದರಿಂದ ನನಗೆ ಆನಂದವಾಯಿತು. ದೇವರು ನಿನಗೆ ಮಂಗಳವನ್ನುಂಟುಮಾಡಲಿ.

ಮೋಹನ : ತಮ್ಮ ಆಶೀರ್ವಚನದಿಂದ ಧನ್ಯನಾದೆ. (ರೂಪಸುಂದರಿಗೆ ವಂದಿಸಿ) ಅಮ್ಮಾ! ಮಹಾತ್ಮರ ಸದುಪದೇಶದಿಂದ ನೀನು ಮಹಾತ್ಮಳಾಗಿರುವುದು ತಿಳಿಯದೆ ಅಪರಾಧವನ್ನು ಆಚರಿಸಿದೆ. ಕ್ಷಮಿಸಬೇಕು.

ಸುಂದರಿ : ತಮ್ಮನ್ನು ಕ್ಷಮಿಸಲು ನಾನೆಷ್ಟರವಳು. ನಮ್ಮೆಲ್ಲರನ್ನು ಮಹಾತ್ಮ ಕನಕದಾಸರ ಆಶೀರ್ವಚನವೇ ಕ್ಷಮಿಸಿ ರಕ್ಷಿಸುವುದು.

ಮೋಹನ : ಪವಿತ್ರನಾದೆ.

ಸುಂದರಿ : ಮಹಾತ್ಮಾ! ತಮ್ಮಿಂದ ಶ್ರೀಕೃಷ್ಣನ ಚರಿತ್ರೆ ಕೇಳಿದಾಗಿನಿಂದ ಉಡುಪಿಗೆ ಹೋಗಬೇಕೆಂದು ಆಸೆಯಾಗಿದೆ.

ಕನಕ : ಆಗಲಿ, ನಾವೆಲ್ಲರು ಕೂಡಿ ನಾಳೆಯೇ ಹೊರಡೋಣ. ಈಗ ಶ್ರೀಕೃಷ್ಣನನ್ನು ಪೂಜಿಸಿ ಭಜನೆ ಮಾಡೋಣ.

[ಅನುಬಂಧ 30]

[ಎಲ್ಲರೂ ಭಜನೆ ಮಾಡುವರು]

[ತೆರೆ]

ಮೂರನೇ ಅಂಕ ಮೂರನೇ ನೋಟ

## – ಉಡುಪಿಗೆ ಹೋಗುವ ಹಾದಿ –

ಭಜನೆಮಾಡುತ್ತಾ ಶಾಮಾಚಾರ್ರು, ರಾಮಾಚಾರ್ರು, ಗುಂಡಾಚಾರ್ರು ಮುಂತಾದವರು ಬರುವರು.

ಶ್ಯಾಮಾ : ರಾಮಾಚಾರ್ರೆ! ಉಡುಪಿ ಇನ್ನು ಎಷ್ಟು ದೂರವಿದೆಯಯ್ಯಾ?

ರಾಮಾ : ಇನ್ನೇನು, ಸಮೀಪಕ್ಕೆ ಬಂದೆವು. ಇಲ್ಲಿಗೆ ಎರಡು ಹರದಾರಿ ಇರಬಹುದು.

ಶ್ಯಾಮಾ : ಪರವಾಯಿಲ್ಲ. ಈದಿನ ದೇವರ ದರ್ಶನ ಮಾಡಿಕೊಳ್ಳಬಹುದು (ಆಗ ಗುಂಡಾಚಾರ್ಯರು ಇನ್ನು ಕೆಲವರು ಭಜನೆ ಮಾಡುತ್ತ ಬರುವರು).

ಶ್ಯಾ–ರಾ : ನಮಸ್ಕಾರ, ನಮಸ್ಕಾರ.

ಗುಂಡಾ : ಓ ನಮಸ್ಕಾರ, ನಮಸ್ಕಾರ.

ಶ್ಯಾಮ : ಏನು ಗುಂಡಾಚಾರ್ರೆ! ಎಲ್ಲಿಗೆ ಪ್ರಯಾಣ?

ಗುಂಡಾ : ಉಡುಪಿಗೆ, ತಾವೆಲ್ಲಿಗೆ?

ರಾಮಾ : ನಾವೂ ಉಡುಪಿಗೆ.

ಗುಂಡಾ : ಚೆನ್ನಾಯಿತು ಬಿಡಿ. ಎಲ್ಲರೂ ಇಲ್ಲಿಯೇ ಕೂಡಿದೆವು.

ಶ್ಯಾಮಾ : ಸುದಿನ.

ಗುಂಡಾ : ಅಲ್ಲಾ, ಆ ಕುರುಬನು ಕೂಡಾ – ಉಡುಪಿಗೆ ಹೊರಟಿದ್ದಾನಂತೆ.

ಶ್ಯಾಮ : ಯಾವ ಕುರುಬ?

ಗುಂಡಾ : ಇನ್ನಾವನು ಅವನೇ.

ಶ್ಯಾಮ : ಅವನೇ ಎಂದರೆ ಯಾರಯ್ಯ?

ಗುಂಡಾ : ಸರಿಹೋಯಿತು. ಅವನೇ ಅಲ್ಲವೇನಯ್ಯಾ ಬಾಳೆಹಣ್ಣು ಹೇಗೆ ತಿನ್ನಬೇಕು ಎಂಬೋದು ಕೂಡ ಗೊತ್ತಿರಲಿಲ್ಲ ನೋಡು ಅವನೇ ಆ ಕುರುಬ.

ಶ್ಯಾಮಾ : ಓಹೋ ಕನಕನೇನು?

ಗುಂಡಾ : ಆ.... ಅವನೇ ನೋಡು.

ರಾಮಾ : ಏನು ಕೃಷ್ಣನ ದರ್ಶನಕ್ಕೆ ಹೊರಟಿದ್ದಾನೆಯೇ?

ಗುಂಡಾ : ಅಹುದು.

ರಾಮಾ : ಆ ಸುಂದರಿ ಜೊತೆಯಲ್ಲಿ ಹೋಗಿದ್ದಾಳೋ ಇಲ್ಲವೋ?

ಗುಂಡಾ : ಯಾವ ಸುಂದರಿ?

ರಾಮಾ : ರೂಪಸುಂದರಿ.

ಗುಂಡಾ : ಆ ಸುಂದರಿ ಅವನ ಹಿಂದೆ ಏಕಯ್ಯಾ ಹೋಗುವುದು?

ಶ್ಯಾಮಾ : ಅವಳು ಈಗ ಹೊಸದಾಗಿ ದಾಸಳಾಗಿದ್ದಾಳೆ. ಬಸವನಿಂದೆ ಬಾಲವೆಂಬಂತೆ ಅವಳನ್ನು ಹಿಂದಿಟ್ಟುಕೊಂಡು ತಿರುಗುತಾನೆ.

ಗುಂಡಾ : ಏನು ಪ್ರಪಂಚವಯ್ಯಾ! ದಾಸಿಯರ ಸಹವಾಸವಿಲ್ಲದೆ ದಾಸರು ಆಗೋದೆ ಇಲ್ಲಾಂತ ಕಾಣುತ್ತೆ.

ರಾಮಾ : ಇಂಥಾ ಕುರುಬದಾಸನಿಗೆ ದೇವಾಲಯ ಪ್ರವೇಶ.

ಶ್ಯಾಮ : ಕುರುಬನಿಗೆ ಪ್ರವೇಶ! ಬ್ರಾಹ್ಮಣನಿಗೆ ಆವೇಶಾ. ಎಲ್ಲಾ ನೋಡುತ್ತೇವೆ. ಬನ್ನಿ ಹೋಗುವ.

(ಹೋಗುವರು)

[ತೆರೆ]

ಮೂರನೇ ಅಂಕ ನಾಲ್ಕನೇ ನೋಟ

## ಉಡುಪಿ

## – ಶ್ರೀಕೃಷ್ಣನ ದೇವಸ್ಥಾನ –

ಧರ್ಮಾಧಿಕಾರಿ, ವಾಸುದೇವಾಚಾರ್ಯರು, ಭೀಮಾಚಾರ್ಯರು, ಗೋವಿಂದಾಚಾರ್ಯರು ಇತರಾದಿ ಯಾತ್ರಿಕರು ಭಜನೆ ಮಾಡುತ್ತ ಬರುವರು.

ಭೀಮಾ : ಕನಕನೆಂಬುವನು ನಿಮಗೆ ಗೊತ್ತಿರಬಹುದಲ್ಲ?

ವಾಸು : ಯಾವ ಕನಕ.

ಗೋವಿ : ಅವನೊಬ್ಬ ಕುರುಬ.

ವಾಸು : ಇರಬಹುದು ಈಗೇನು?

ಭೀಮಾ : ಅವನು ಇಲ್ಲಿಗೆ ಬರುವವನಿದ್ದಾನೆ.

ವಾಸು : ಏತಕ್ಕಾಗಿ?

ಗೋವಿ : ದೇವರ ದರ್ಶನಕ್ಕಾಗಿ.

ವಾಸು : ಬರಲಿ.

ಭೀಮಾ : ಬಂದೇಬರುವನು. ನೀವು ಮಾತ್ರ ಅವನನ್ನು ಒಳಗೆ ಬಿಡಕೂಡದು.

ವಾಸು : ಏಕೆ?

ಭೀಮಾ : ಅವನು ಹೀನಜಾತಿಯವ.

ವಾಸು : ನಮ್ಮ ಭಾವನೆಯಲ್ಲಿ ಅವನು ಹೀನಜಾತಿಯವನಾದರೂ ದೇವರಿಗೆ ಎಲ್ಲರೂ ಸಮಾನರಲ್ಲವೆ?

ಗೋವಿ : ಅದು ಹೇಗೆ. ಪುರಾತನ ಕಾಲದಿಂದಲು ಹೀನಜಾತಿಯವರಿಗೆ ದೇವಾಲಯ ಪ್ರವೇಶವಿಲ್ಲವೆಂದ ಮೇಲೆ ಈಗ ನಿಮ್ಮ ಅಧಿಕಾರದಲ್ಲಿ ಅದು ನಡೆಯಬಹುದೇ?

ಭೀಮಾ : ಅವನು ಮಹಾಪ್ರಪಂಡ. ವ್ಯಾಸರಾಯರ ಮಠವನ್ನು ಸೇರಿ ಸ್ವಾಮಿಗಳನ್ನು ಬೆರಗುಮಾಡಿ ಬ್ರಾಹ್ಮಣರಿಗೆ ಹೇಳಲಾರದ ಅವಮಾನ ಮಾಡಿದ್ದಾನೆ. ಈಗ ಅಂತವನಿಗೆ ದೇವಾಲಯ ಪ್ರವೇಶಕ್ಕೆ ಅನುಮತಿ ಕೊಟ್ಟರೆ ಬ್ರಾಹ್ಮಣರು ಗೌರವದಿಂದ ಬಾಳುವದಾದರೂ ಹೇಗೆ?

ಗೋವಿ : ಮುಂದೆ ಅವರ ಧರ್ಮಗಳು ಉಳಿಯುವುದಾದರೂ ಹೇಗೆ.

ವಾಸು : ಆಚಾರ್ಯರೇ! ಬ್ರಾಹ್ಮಣರ ಧರ್ಮಗಳು ಅಷ್ಟು ನಿರ್ಬಲವಾದವುಗಳೇ. ಒಬ್ಬ ಶೂದ್ರನಿಗೆ ಅಂಜಿ ಓಡುವ ಧರ್ಮಗಳು ನಮಗೆ ಯಾವ ಆತ್ಮಬಲವನ್ನು ಕೊಡಬಲ್ಲವು.

ಭೀಮಾ : ನೀವು ಹೀಗೆ ಮಾತನಾಡುವಿರೆಂದು ತಿಳಿದಿರಲಿಲ್ಲ.

ಗೋವಿ : ಗುಡಿಯ ಧರ್ಮಾಧಿಕಾರಿಯೇ ಈ ರೀತಿ ವರ್ತಿಸಿದರೆ ಇನ್ನು ಬ್ರಾಹ್ಮಣರ ಕುಲ ಉಳಿಯಬೇಕೋ ಅಳಿಯಬೇಕೋ.

ವಾಸು : ಕುಲವು ಉಳಿಯುವುದು ಅಳಿಯುವುದು ಅವರವರ ಸತ್ಕರ್ಮದ ಮೇಲೆ ಅವಲಂಬಿಸಿರುತ್ತೆ.

ಭೀಮಾ : ಆ ಸತ್ಕರ್ಮಕ್ಕೆ ನೀವೇ ವಿಘ್ನಕಾರಿಗಳಾಗುತ್ತೀರಿ.

ವಾಸು : ಆಚಾರ್ಯರೆ! ಆತುರಪಡಬೇಡಿ. ನಿಜವಾದ ಧರ್ಮಕ್ಕೆ ಯಾರು ವಿಘ್ನ ಮಾಡಿದರೂ ಅದು ಅಳಿಯಲಾರದು. ನೋಡಿ ಎಲ್ಲರೂ ಭಕ್ತಿಭಾವದಿಂದ ದೇವರನ್ನು ಆರಾಧಿಸಬೇಕೆಂಬ ಸದುದ್ದೇಶದಿಂದ ನಮ್ಮವರು ದೇವಾಲಯಗಳನ್ನು ಕಟ್ಟಿದರು. ಆ ಹಿರಿಯರ ಉದ್ದೇಶವನ್ನು ನಾವು ನೆರವೇರಿಸುವುದು ಧರ್ಮವಲ್ಲವೆ?

ಭೀಮಾ : ನಿಮ್ಮಂಥವರನ್ನು ಈ ದೇವಾಲಯಕ್ಕೆ ಧರ್ಮಾಧಿಕಾರಿಗಳನ್ನಾಗಿ ನೇಮಿಸಿದುದು ತೀರಾ ತಿಳಿಗೇಡಿತನ.

ಗೋವಿ : ನಿಮ್ಮ ಕೂಡ ತರ್ಕಮಾಡಲಿಕ್ಕೆ ಇಲ್ಲಿಗೆ ನಾವು ಬಂದಿಲ್ಲ. ಆ ಕುರುಬನನ್ನು ಗುಡಿಯಲ್ಲಿ ಬಿಡಬಾರದೆಂದು ಹೇಳಲು ಬಂದಿದ್ದೇವೆ.

ಭೀಮಾ : ಒಂದುವೇಳೆ ನೀವು ಅವನನ್ನು ದೇವಾಲಯ ಪ್ರವೇಶ ಮಾಡಿಸುವುದಾದರೆ ನಾವು ಮಹಾಸ್ವಾಮಿಗಳಿಗೆ ಈ ವಿಚಾರವನ್ನು ಪರಿಶೀಲಿಸಲು ಬಿನ್ನಹ ಮಾಡಬೇಕಾಗುವುದು. ಇದರ ಮೇಲೆ ನಿಮ್ಮಿಷ್ಟ

ವಾಸು : ಆಚಾರ್ಯರೇ! ಪಂಡಿತರಾದ ತಾವು ಧರ್ಮರಹಸ್ಯವನ್ನು ಗ್ರಹಿಸದಿದ್ದುದಕ್ಕಾಗಿ ನನಗೆ ಅತ್ಯಂತ ಖೇದವಾಗುತ್ತದೆ. ಮಾಡುವುದೇನು ನಿಮ್ಮ ಕುಣಿತಕ್ಕೆ ನಾನೂ ತಾಳ ಹಿಡಿಯುವೆನು.

[ಶಿಷ್ಯರ ಸಹಿತ ಕನಕದಾಸನು ಹಾಡುತ್ತಾ ಬರುವರು]

[ಅನುಬಂಧ ೩೧]

ಭೀಮಾ : (ಮುಂದೆ ಬಂದು) ಏ ಕುರುಬಾ ಅಲ್ಲೇ ನಿಲ್ಲು.

ಕನಕ : (ನೋಡಿ) ಸ್ವಾಮಿ! ಈ ದಾಸನು ವಂದಿಸುವನು.

ಭೀಮಾ : ನಿನ್ನ ವಂದನೆ ನಿನಗಿರಲಿ. ಈ ಕಳ್ಳವಿನಯದಿಂದ ವ್ಯಾಸರಾಯರ ಮಠ ಅಪವಿತ್ರ ಮಾಡಿದ್ದಲ್ಲದೆ ಇಲ್ಲಿಗೂ ಬಂದೆಯೊ?

ಗೋವಿ : ಸಕುಟುಂಬ ಸಪರಿವಾರ ಸಮೇತನಾಗಿ ದಯಮಾಡಿಸಿದ್ದಾನೆ.

ಕನಕ : ಸ್ವಾಮಿ! ಆಕೆ ನನ್ನ ತಾಯಿ.

ಭೀಮಾ : ತಾಯಿಯೋ ಮಾಯೆಯೋ ಮೊದಲು ಹೊರಡು.

ಕನಕ : ಏಕೆ?

ಭೀಮಾ : ನೀನು ಇಲ್ಲಿಗೆ ಬರಬಾರದು.

ಕನಕ : ಏತಕ್ಕೆ?

ಗೋವಿ : ನೀನು ಕುರುಬನಾದುದಕ್ಕೆ

[ಅನುಬಂಧ ೩೨]

ಕನಕ : ನಾನು ಕುರುಬನಾದುದು ನಿಮಗೋ ಅಥವಾ ದೇವರಿಗೋ.

ಭೀಮಾ : ಯಾರಿಗಾದರೇನು, ನೀನು ಕುರುಬನೆಂದ ಮೇಲೆ ಎಲ್ಲರಿಗೂ ಕುರುಬನೇ ಸರಿ.

ಕನಕ : ಕುರುಬನು ದೇವರನ್ನು ನೋಡಬಾರದೆ?

ಭೀಮಾ : ದೇವರನ್ನು ನೋಡುವುದೇ ಅಲ್ಲ, ದೇವಾಲಯದ ಮೆಟ್ಟಿಲನ್ನು ಕೂಡಾ ಹತ್ತಬಾರದು.

ಕನಕ : ಚೆನ್ನಾಗಿದೆ. ಈ ಆಜ್ಞೆಯು ನಿಮ್ಮದೋ ದೇವರದೋ?

ಗೋವಿ : ಹರಟೆ ತೀರಾ ಹೆಚ್ಚಾಯಿತು. ಬರಬಾರದೆಂದ ಮೇಲೆ ಹೊರಟು ಹೋದರಾಯಿತು.

ಕನಕ : ಸ್ವಾಮಿ! ಕೋಪವೇಕೆ ದೇವಾಲಯವನ್ನು ಪ್ರವೇಶ ಮಾಡಲು, ದೇವರ ದರ್ಶನ ಮಾಡಿಕೊಳ್ಳಲು ಎಲ್ಲರೂ ಸಮಾನರು ಅಂದ ಮೇಲೆ ತಾವು ಹೊರಟುಹೋಗೆಂದು ಹೇಳುವುದೆ?

ಗೋವಿ : ಓಹೋ ಲಕ್ಷಣವಾಗಿ.

ಕನಕ : ತಾವು ದೊಡ್ಡಮನಸ್ಸು ಮಾಡಬೇಕು. ನನ್ನನ್ನು ಆತಂಕ ಪಡಿಸಬೇಡಿರಿ.

ವಾಸು : ಅಯ್ಯಾ! ಇದು ಸಾಹಸತನವಲ್ಲವೇ?

ಕನಕ : ಸ್ವಾಮಿ! ದೇವರ ದರ್ಶನಕ್ಕೆ ಹೋಗುವುದು ಸಾಹಸತನವೇ?

ವಾಸು : ನೀನು ದೇವರ ದರ್ಶನಕ್ಕೆ ಅನರ್ಹನೆಂದು ಹೇಳಿದರೂ ಕೇಳದೆ ದುಡುಕುವುದು ಸಾಹಸತನವಲ್ಲದೆ ಮತ್ತೇನು?

ಕನಕ : ದೇವರ ದರ್ಶನಕ್ಕೆ ಅನರ್ಹನಾದುದು ನಾನು ಕುರುಬ ಜಾತಿಯವನೆಂದಲ್ಲವೇ?

ವಾಸು : ಹೌದು.

ಕನಕ : ಸ್ವಾಮಿ! ಆ ಕುರುಬರನ್ನು ಯಾರು ನಿರ್ಮಿಸಿದರು?

ವಾಸು : ದೇವರು.

ಕನಕ : ದೇವರು ಮೊದಲು ಮಾನವರನ್ನು ನಿರ್ಮಿಸಿದನೋ ಅಥವಾ ಜಾತಿಗಳನ್ನು ನಿರ್ಮಿಸಿದನೋ?

ವಾಸು : ಹುಟ್ಟಿಸುವಾಗ ಎಲ್ಲರನ್ನು ಮಾನವರನ್ನಾಗಿಯೇ ನಿರ್ಮಿಸಿದ.

ಕನಕ : ಅಂದಮೇಲೆ ನಮ್ಮನ್ನು ಸೃಷ್ಟಿಸಿ ರಕ್ಷಿಸಿದ ದೇವರನ್ನೇ ನೋಡಲು ನಮಗೆ ಅಧಿಕಾರವಿಲ್ಲವೇ?

ಭೀಮಾ : ಓಹೋ, ಅಧಿಕಾರದ ಜಂಭವನ್ನು ತೋರಿಸಲಿಕ್ಕೆ ಇಲ್ಲಿಗೆ ಬಂದಿದ್ದೀಯಾ? ಧರ್ಮಾಧಿಕಾರಿಗಳು ಮೃದುವಾಗಿ ಮಾತನಾಡಿದಷ್ಟು, ನಿನ್ನ ಆಟಾಟೋಪವನ್ನೇ ಹೆಚ್ಚಿಸುತ್ತಿರುವೆಯಾ!

ಗೋವಿ : ಏ ಕನಕಪ್ಪಾ! ನಿನ್ನ ಅಧಿಕಾರ ಇಲ್ಲಿ ನಡೆಯೋದಿಲ್ಲ.

ಕನಕ : ಅಧಿಕಾರ ನಡೆಸಲಿಕ್ಕೆ ಇಲ್ಲಿಗೆ ಬರಲಿಲ್ಲ. ದೇವರ ದರ್ಶನಕ್ಕೆ ಬಂದೆ.

ಗೋವಿ : ಸರಿ. ಬಂದದ್ದಾಯಿತು. ಇನ್ನು ಹೊರಡು, ಹೆಚ್ಚುಮಾತು ಬೇಡ.

ಕನಕ : ಸ್ವಾಮಿ! ಇದು ಅನ್ಯಾಯವಲ್ಲವೆ?

ಭೀಮಾ : ಅಹುದು. ನಿನ್ನನ್ನು ಇಲ್ಲಿಯವರೆಗೂ ಬಿಟ್ಟದ್ದು ಒಂದು ಅನ್ಯಾಯ. ಇದುವರೆಗೂ ನಿನ್ನ ಸಂಗಡ ಮಾತನಾಡಿದ್ದು ಎರಡನೆಯ ಅನ್ಯಾಯ. ಇನ್ನು ಮೂರನೆಯ ಅನ್ಯಾಯ ಪ್ರಯೋಗವಾಗುವುದು ಬಾಕಿ ಉಳಿದಿದೆ. ಎಲೇ ಯಾರಲ್ಲಿ ಇವನನ್ನು ಹೊರಗೆ ನೂಕಿ.

[ಅನುಬಂಧ ೩೩]

[ಸೇವಕನು ಬಂದು ಕನಕದಾಸರನ್ನು ಕತ್ತು ಹಿಡಿದು ಹೊರಗೆ ನೂಕುವನು]

[ತೆರೆ]

ಮೂರನೇ ಅಂಕ ಐದನೇ ನೋಟ

## ಗುಡಿಯ ಹೊರಭಾಗ

### – ಬೀದಿ –

ಶಿಷ್ಯರ ಸಹಿತ ಕನಕದಾಸರು ಪದ್ಯ ಹೇಳುತ್ತಾ ಬರುವರು ಹಾದಿಯಲ್ಲಿ ಒಬ್ಬ ಕುಂಟನು ಬಿಕ್ಷೆ ಬೇಡಲು ಕುಳಿತಿರುವನು.

[ಅನುಬಂಧ ೩೪]

ಕುಂಟ : ಯಪ್ಪಾ! ಧರ್ಮಮಾಡು ತಂದೆ. ಕಾಲಿಲ್ದ ಕುಂಟಗೆ ಒಂದ್ಬೊಟ್ಟು ದಾನ ಮಾಡಪ್ಪ. ದೇವರು ನಿಮಗೆ ಒಳ್ಳೇದು ಮಾಡ್ತಾನೆ.

ಕನಕ : ದೇವರು.... ಎಲ್ಲಿದ್ದಾನೋ ಆ ದೇವರು.

ಕುಂಟ : ಗುಡಿಯೊಳಗೆ ಇದ್ದಾನಲ್ಲ ನಮ್ಮಪ್ಪ.

ಕನಕ : ಅವನು ಬ್ರಾಹ್ಮಣರ ದೇವರು. ನಮ್ಮಂಥ ಅನಾಥರನ್ನು ರಕ್ಷಿಸುವ ದೇವರು ಅಲ್ಲಿಲ್ಲ.

ಕುಂಟ : ಅಯ್ಯೋ ಸ್ವಾಮಿ! ಹಾಗೆ ಹೇಳೋದುಂಟೆ. ದೇವರು ಎಲ್ಲಾರ್ನ ಕಾಪಾಡುತ್ತಾನೆ.

ಕನಕ : ದೇವರು ಕಾಪಾಡುವವನಾಗಿದ್ದರೆ ಕತ್ತು ಹಿಡಿದು ನೂಕಿಸುತ್ತಿರಲಿಲ್ಲ.

ಕುಂಟ : ನಮ್ಮಪ್ಪಾ! ಇದು ದೇವರ ತಪ್ಪಲ್ಲಪ್ಪಾ! ಇದೆಲ್ಲಾ ದಕ್ಷಿಣೆಗಾಗಿ ಕಾದು ಕೂತಿರೋ ಪೂಜಾರಪ್ಪನವರ ಆಟ.

ಸುಂದರಿ : ಇರ್ಲಿ, ನೀನು ಗುಡಿಯಲ್ಲಿದ್ದ ದೇವರನ್ನು ನೋಡಿದ್ದೀಯಾ?

ಕುಂಟ : ನಿಮ್ಮಂತೋರ್ನ ಒಳಗೆ ಬಿಡದ ಮೇಲೆ ಈ ಕುಂಟನನ್ನು ಯಾರು ಬಿಡಬೇಕು ತಾಯಿ.

ಕನಕ : ಅಂದಮೇಲೆ ನೀನು ನೋಡದ ದೇವರಲ್ಲಿ ನಿನಗೆ ನಂಬಿಕೆ ಏನು?

ಕುಂಟ : ಸ್ವಾಮಿ! ದೇವರನ್ನು ಗುಡಿಯೊಳಗೇ ನೋಡಬೇಕೆ?

ಕನಕ : ಹಾಗಾದರೆ ಮತ್ತೆಲ್ಲಿ ನೋಡಬೇಕು?

ಕುಂಟ : ಎಲ್ಲಿ ನೋಡಿದರೂ ಅವನೇ ಇದ್ದಾನೆ.

ಕನಕ : ಅದು ನಿನಗೆ ಹೇಗೆ ಗೊತ್ತು.

ಕುಂಟ : ನನಗೇನು ಗೊತ್ತು ಸ್ವಾಮಿ! ತಮ್ಮಂತೋರು ಹೇಳಿದ್ದೆ.

ಸುಂದರಿ : ಹಾಗಾದರೆ ದೇವರು ಇರುವುದು ನಿಜವೇನು?

ಕುಂಟ : ಅಯ್ಯೋ ತಾಯಿ! ಆ ದೇವರೇ ಇಲ್ದಿದ್ರೆ ಪ್ರಪಂಚೆಲ್ಲಾ ಕತ್ತಲಾಗುತ್ತಿತ್ತು.

ಕನಕ : ದೇವರನ್ನು ಕಾಣದೆ ನನ್ನ ಮನಸ್ಸು ಈಗ ಕತ್ತಲಾಗಿದೆ.

ಕುಂಟ : ಅದೇಕೆ ಸ್ವಾಮಿ! ನೀವು ಚಿಂತೆಮಾಡೋದು, ಗುಡಿಯೊಳಗಿದ್ದ ದೇವರು ಗುಡಿ ಹೊರಗೂ ಇದ್ದಾನಲ್ಲ.

ಕನಕ : ನಿಜ. ನೀನು ಹೇಳಿದಂತೆ ದೇವರು ಗುಡಿಹೊರಗಿದ್ದರೆ ಅಲ್ಲಿಗೇ ಹೋಗಿ ಆತನನ್ನು ಕರೆಯುವ ಬನ್ನಿ.

ಕುಂಟ : ನಾನು ಬರಲಾರೆ ಸ್ವಾಮಿ! ನಡೆಯೋಕೆ ಕಾಲಿಲ್ಲ.

ಕನಕ : ಚಿಂತೆಯಿಲ್ಲ, ನಿನ್ನನ್ನು ಎತ್ತಿಕೊಂಡು ಹೋಗುವೆವು. ಈ ದಿನ ನಿನ್ನ ಉಪದೇಶದಿಂದ ಸರ್ವಜ್ಞತ್ವವನ್ನು ತಿಳಿದುಕೊಂಡೆ.

[ಎಂದು ಕುಂಟನನ್ನು ಎತ್ತಿಕೊಂಡು ಹೋಗುವರು]

[ತೆರೆ]

ಮೂರನೇ ಅಂಕ ಆರನೇ ನೋಟ

## – ಗುಡಿಯ ಹಿಂದಿನಭಾಗ –

ಕನಕದಾಸರು ಇತರ ಶಿಷ್ಯರು ಇರುವರು. ಕನಕದಾಸರು ಶ್ರೀಕೃಷ್ಣನನ್ನು ಧ್ಯಾನಿಸುತ್ತಿರುವಾಗ ಗೋಡೆಯು ಒಡೆದು ಕಂಡಿ ಬೀಳುವುದು. ದೇವರು ಕನಕದಾಸರ ಅಭಿಮುಖವಾಗಿ ತಿರುಗುವನು.

ಕನಕ : ಕೃಷ್ಣಾ! ನಿನ್ನನ್ನು ನೋಡಲು ನಾನು ಬರಲಿಲ್ಲ. ಸದಾ ನಿನ್ನ ಮೋಹನಾಕಾರವು ನನ್ನ ಕಣ್ಣೆದುರಿಗೆ ನಲಿಯುತ್ತಲೇ ಇದೆ. ಆ ಲೀಲಾ ವಿಗ್ರಹವನ್ನು ನೋಡಲು ನಾನಿಲ್ಲಿಗೆ ಬರಲಿಲ್ಲ. ಮಹಾಮಹಿಮರಾದ ಮಧ್ವಾಚಾರ್ಯರು ಯಾವ ಶ್ರೇಷ್ಠ ಗುಣ ವಿಶಿಷ್ಟತೆಯ ಆವಿಷ್ಕಾರದಾಕಾರವನ್ನಳವಡಿಸಿರುವರೆಂಬುವನ್ನು ನೋಡಲು ಬಂದೆ. ದರ್ಶನವೀಯುವುದು ನಿನಗಿಷ್ಟವಿಲ್ಲದಿದ್ದರೆ ನನಗಾಗುವ ನಷ್ಟವೇನೂ ಇಲ್ಲ. ಆದರೆ ಈ ನಿನ್ನ ರೀತಿಯು ಭಕ್ತರ ಸಮ್ಮತವಲ್ಲ. (ಆನಂದದಿಂದ ಸಾಷ್ಟಾಂಗವೆರಗುವನು) ಕೃಷ್ಣಾ! ಕೃಷ್ಣಾ! ಭಕ್ತಪರಾಧೀನಾ. ಭಕ್ತನ ಇಚ್ಛೆಗಾಗಿ ಈ ರೀತಿ ಕಟ್ಟಡವನ್ನೇ ಭೇದಿಸಿ ಈ ಅಲ್ಪನಿಗೆ ಅಭಿಮುಖವಾಗಿ ದರ್ಶನವನ್ನು ಕೊಟ್ಟೆಯಾ, ದೇವಾ ನಿನ್ನ ಲೀಲೆಯು ಅಮೋಘವಾದುದು. (ಎಂದು ಸ್ತೋತ್ರಮಾಡುತ್ತಿರುವನು).

[ಧರ್ಮಾಧಿಕಾರಿಯು, ಭೀಮಾಚಾರ್ಯರು, ಗೋವಿಂದಾಚಾರ್ಯರು, ದೇವರು ತಿರುಗಿದ್ದುದನ್ನು ನೋಡಿ ಆಶ್ಚರ್ಯಪಡುವರು.]

ವಾಸು : ಏನಿದಾಶ್ಚರ್ಯ ದೇವರು ಗುಡಿಯ ಹಿಂಭಾಗಕ್ಕೆ ತಿರುಗಿದನಲ್ಲ.

ಭೀಮಾ : ಇದು ತೀರಾ ಸೋಜಿಗ.

ಗೋವಿ : ಇದೆಲ್ಲಾ ಆ ಕಪಟ ಕನಕನದೇ ಆಗಿರಬಹುದು ಅವನು ಮಾಯಾವಿ.

ವಾಸು : ಆ ಮಹಾತ್ಮನನ್ನು ಅವಮಾನಪಡಿಸಿದ್ದರಿಂದ ದೇವರು ನಮ್ಮ ಮೇಲೆ ಮುನಿದ. ನಿಮ್ಮ ಮಾತು ಕೇಳಿ ಇಷ್ಟೆಲ್ಲಾ ಅನರ್ಥವಾಯಿತು. ಇನ್ನು ಆ ಮಹಾತ್ಮನನ್ನು ಬೇಡಿಕೊಳ್ಳೋಣ ಬನ್ನಿ (ಎಲ್ಲರೂ ಹೋಗಿ ಕನಕದಾಸನಿಗೆ ಅಡ್ಡ ಬೀಳುವರು).

ಕನಕ : ಅಯ್ಯೋ! ಅಯ್ಯೋ!! ಇದೇನು ಅಲ್ಪನಿಗೆ ನಮಸ್ಕರಿಸುವುದೆ?

ವಾಸು : ಮಹಾತ್ಮಾ! ತಮ್ಮನ್ನು ನಿಂದಿಸಿದ ನಾವು ಅಲ್ಪರು. ತಮ್ಮ ಭಕ್ತಿಗೆ ಮೆಚ್ಚಿ ದೇವರು ತಮಗೆ ಅಭಿಮುಖನಾದ, ನಮಗೆ ವಿಮುಖನಾದ, ನಾವು ಪಾಪಿಗಳು ಕ್ಷಮಿಸಬೇಕು.

ಭೀಮಾ : ನಾನು ಮಹಾಪಾತಕಿ. ಕಡೆಯವರೆಗೂ ಎಲ್ಲಿಗೆ ಹೋದರೂ ಅಲ್ಲಿಗೆ ಹೋಗಿ ತಮ್ಮನ್ನು ನಾನಾಪರಿ ಪೀಡಿಸಿದೆ. ಈ ದ್ರೋಹಿಯನ್ನು ಉದ್ಧಾರಮಾಡಬೇಕು.

ಗೋವಿ : ಸ್ವಾಮಿ! ತಮ್ಮ ಮಹಿಮೆಯನ್ನು ತಿಳಿಯದೆ ಅನೇಕ ಸಂಕಟಗಳನ್ನು ಉಂಟುಮಾಡಿದೆವು. ಕ್ಷಮಿಸಬೇಕು.

ಕನಕ : ಮಹನೀಯರೆ! ನನಗೆ ತಾವು ಯಾವ ಅಪಕಾರವನ್ನೂ ಮಾಡಲಿಲ್ಲ. ತಾವು ದೊಡ್ಡವರು, ನಾನು ಅಲ್ಪ, ನನ್ನನ್ನು ನೀವು ಈ ರೀತಿ ಕೊಂಡಾಡಬಹುದೆ?

ವಾಸು : ದಾಸಮಹಾಶಯರೆ! ಶ್ರೀಕೃಷ್ಣನನ್ನು ಯಥಾಪ್ರಕಾರ ತಿರುಗಿಸಿ ನಮ್ಮನ್ನು ಉದ್ಧರಿಸಬೇಕು.

ಕನಕ : ಸ್ವಾಮಿ! ಇನ್ನು ದೇವರು ಯಾವಕಡೆಗೂ ತಿರುಗುವಂತಿಲ್ಲ. ಇದೇ ಕಿಂಡಿಯಿಂದಲೇ ದೇವರ ದರ್ಶನ. ಅದು ಪರಮಾತ್ಮನ ಸಂಕಲ್ಪ.

ವಾಸು : ದೈವೇಚ್ಛೆ ಮೀರಲು ಯಾರಿಗೆ ಸಾಧ್ಯ. ಈ ಕಿಂಡಿಯು ತಮ್ಮಿಂದ ಉಂಟಾಯಿತಾದ್ದರಿಂದ ಇದು ಕನಕನಕಿಂಡಿಯೆಂದು ಪ್ರಸಿದ್ಧವಾಗಲಿ.

[ಎಲ್ಲರೂ ದೇವರಿಗೆ ಮಂಗಳ ಮಾಡುವರು]

[ಅನುಬಂಧ ೩೩]

[ತೆರೆ]

ಒಂದನೇ ಅಂಕ ಒಂದನೇ ನೋಟ

1. ಕುರುಬರು.

ರಾಗ– ಎರುಕಲಕಾಂಭೋಜಿ. ಆದಿತಾಳ

ಬೀರಯ್ಯಬಾ ಬರ್ಮಯ್ಯಬಾ
ಬಂದೆಮ್ಮ ಕಾಯಲು ಬೇಗನೆ ಬಾ ॥ ಪ ॥
ಕುರಿಯನು ತಂದೇವು ಬಲಿಯನು ಕೊಡುವೇವು
ಕರಣದಿನೋಡಯ್ಯ ಕುರುಬರ ಕುಲದೇವ ॥ ಅ ॥
ನೀನೇ ಲೋಕಕ್ಕೆ ಬಲುದೊಡ್ಡ ದೇವನು ಬಲವಂತನು ನೀ ಗುಣವಂತನು
ದ್ಯಾನವ ಮಾಡ್ವೇವು ಸಂತೋಷದೀನಾವು ಕುಣಿಯುತ ಕುಣಿಯುತ ನಲಿಯುವೆವು ॥ ೧ ॥

2. ತಿಮ್ಮಪ್ಪನಾಯಕ

ರಾಗ – ಭೈರವಿ

ಕ॥ ಜೀವರು ಜೀವತ್ವದದು –
ಭಾರ್ವನೆಗಳ ಕಳೆದುಕೊಳ್ಳಲೆಳಸುತೆ ನಿರುತಂ
ದೇವರ ದರ್ಶನವೆಸಗುತೆ
ಪಾವನತೆಯನೊಂದುತಿರ್ಪರವನೀಲದೋಳ್॥

3.

ರಾಗ – ಪೀಲು. ಆದಿತಾಳ

ಅರಿಯದ ಮಗುವಿನ ಮೊರೆ ಕೇಳಯ್ಯಾ
ಕರುಣದಿಪಾಲಿಸು ಬೀರಯ್ಯ ದೇವ ॥ ಪ ॥
ಕರ್ಮದಿ ಬಳಲುವ ಕರ್ಮಿಯು ನಾನಯ್ಯ ಕರ್ಮವನಳಿದ ನಿರ್ಮಲನೀನಯ್ಯ
ಧರ್ಮವ ತಿಳಿಯದ ದುರ್ಮತಿ ನಾನಯ್ಯ ಧರ್ಮಪಾಲಕನು ನೀನಯ್ಯ ದೇವ ॥ ೧ ॥
ಘನಯೋಗದಿ ನಿನ್ನನೋಡಲಾರೆನಯ್ಯ ಅನುದಿನತವನಾಮ ನೆನೆಯುವೆನಯ್ಯ
ಧನಕನಕಾದಿಯ ಭ್ರಮೆಯನು ಬಿಡಿಸಯ್ಯ ನಿನ್ನ ದಾಸರ ದಾಸನೆಂದೆ ನಿಸಯ್ಯ॥೨॥

4. ತಿಮ್ಮಪ್ಪನಾಯಕ

ರಾಗ – ತೋಡಿ

ಸೀ॥ ಕೇಡನೆಸಗದೆಯೆ ಕಾಪಾಡುವರು ನೀವೆಂದು
ನೋಡುತಿದೆ ನಿಮ್ಮಗಳ ಮುಖವ ಕುರಿಯು
ಕೂಡಿನೀವೀಗ ಕೊಲೆಮಾಡುವುದನರಿಯದೆಯೆ
ನೀಡುತಿದೆ ತಳಿರುಣಲುಮುಖವ ಕುರಿಯು
ಕಾಡುವನೆ ಪ್ರಾಣಿವಧೆಮಾಡುತದನು ತನಗೆಡೆ

ಮಾಡಬೇಕೆಂದು ನಿಮ್ಮನು ದೇವರು
ಮೂಢಜನರಿಂದಾದ ರೂಢಿಯಿದು ಪುಣ್ಯವನು
ನೀಡದೆಂದುಂ ಮೆಚ್ಚನೀದೇವರು
ಗೀ॥ ನೋಡೆ ಧರ್ಮಕೆವರಮಾತೇ ಭೂತದಯೆಯು
ನೋಡಿರಖಿಳ ಜೀವಿಗಳು ನಿಮ್ಮ ತೆರದೆ
ಮಾಡಕೂಡದೆಂದಿಗೆ ನೀವು ಪ್ರಾಣಿವಧೆಯ
ನಾಡಜನಕೆ ತಿಳಿಸಿರಿಂತ ಮುದದೆಬಿಡದೆ.

5. ಕುರುಬರು

ರಾಗ – ಶ್ಯಾಮ

ಪರಮಾಣ ಮಾಡ್ವೇವು ಎಮ್ಮ ಬೀರಯ್ಯನ ಪಾದವಬಡಿದು ನಾವೆಲ್ಲ ಇದು ಸುಳ್ಳಲ್ಲ ॥ ಪ ॥
ಕುರಿಗಳ ಬಲಿಯನ್ನು ಕೊಡುವುದು ಎಲ್ಲ ಕೊಟ್ಟರೆ ನರಿನಾಯಿಯಾಗಿ ಹುಟ್ಟೇವು ನಾವೆಲ್ಲ ಇದು ಸುಳ್ಳಲ್ಲ ॥ ಅ ॥
ಸೂರ್ಯಪ್ಪ ಶಂದ್ರಪ್ಪರಿದಕೇ ಸಾಕ್ಸಿ ಒಡೆಯತಿಮ್ಮಪ್ಪನ ಪಾದದಸಾಕ್ಸಿ
ತಿಳಿಯದೆ ಪಾಪಮಾಡಿದೆವು ನಾವು ಕುರುಬರಕಾಯೋ ನಮ್ಮಪ್ಪ ಓ ಬೀರಪ್ಪ ॥ ೧ ॥

ಎರಡನೇ ನೋಟ

6. ಬೀರಣ್ಣ

ರಾಗ – ಎಂಕುಲಕಾಂಬೋಜಿ ಆದಿತಾಳ

ಕುಲ ಕುಲ ಅಮ್ತಾರಣ್ಣ ಕುಲಯಾರು ಮಾಡಿದರಣ್ಣ
ಕುಲವಂತರೆಂದುಬಲು ಬಡಿದಾಡಿ ಸಾಯ್ತಾರಣ್ಣ ॥ ಪ ॥
ನಮ್ಕುಲ ಎಚ್ಚಂತಾರೆ ನಿಮ್ಕುಲ ಕಡಿಮೆಂತಾರೆ
ನಮ್ಕುಲ ನಿಮ್ಮ ಕುಲ ಮಾಡ್ದೋರು ಯಾರಣ್ಣ ॥ ೧ ॥
ಬೀರಪ್ಪ ದೇವರು ಮನಿಶೋರ್ನ ಮಾಡಿದನಣ್ಣ
ಗಂಡು ಎಣ್ಣು ಎಂಬೋ ಯಳ್ಡೇಕುಲವಣ್ಣ ॥ ೨ ॥

---

ಮೂರನೇ ನೋಟ

7. ಕನಕನಾಯಕ

ರಾಗ – ಗುಜರಿತೋಡಿ, ಆದಿತಾಳ

ಭಜಿಪೆದೇವ ದೇವೇಶಾ ॥ ಪ ॥
ದಯಧಾಮ ಭಯದೂರ ಪರಾತ್ಪರ ಪರಂಜ್ಯೋತಿ ಪರಮೇಶ್ವರ ಸ್ವಾಮಿ ॥ ಅ ॥

ಕೃಷ್ಣ ಮುರಾರಿ ಓಗಿರಿದಾರಿ ಮುದವನು ತೋರಿ ಪಾಲಿಸುಶೌರಿ
ಪುರುಷೋತ್ತಮ ಶ್ರೀ ಹೃದಯವಿಹಾರಿ ॥ ೧ ॥

8. ಕನಕನಾಯಕ

ರಾಗ – ಮೋಹನ

ಮಗನಿಂದ ಗತಿಯುಂಟೆ ಜಗದೊಳಗೆ ನಿಗಮಾಥ ತತ್ವವಿಚಾರದಿಂದಲ್ಲದೆ॥
ತ್ರಿಗುಣರಹಿತ ಪರಮಾತ್ಮನ ಧ್ಯಾನದಿ
ಹಗಲು ಇರುಳು ನಿತ್ಯಾನಂದದಿಂದ
ಬಿಗಿದು ಪ್ರಪಂಚವಾಸನೆಯ ಬಿಟ್ಟವರಿಗೆ
ಮಗನಿದ್ದರೇನು ಇಲ್ಲದಿದ್ದರೇನು ॥ ೧ ॥
ಲಲನೆ ಪುರುಷರು ತಮ್ ತಮ್ಮಕಾಮದಾ
ಸಲುವಾಗಿ ಕೂಡಲು ಶುಕ್ಲರಕ್ತಮಿಳಿತವಾದ ಪಿಂಡೆ
ಪೂರ್ವದಗತಿಯಿಂದ
ನೆಲಕೆ ಬೀಳಲದು ಸಲಹಿ ರಕ್ಷಿಪುದೆ
ಸತ್ಯನೊಬ್ಬಮಗ ಶಾಂತಿಯೊಬ್ಬಮಗದುರ್-
ವೃತ್ತಿನಿಗ್ರಹನೊಬ್ಬಮಗ
ಉತ್ತಮನೊಬ್ಬಮಗ ನೀನಾಲ್ಕು ಮಕ್ಕಳಿದ್ದ ಮೇಲೆ
ಹೆತ್ತರೇನಿನ್ನು ಹೆರದಿದ್ದರೇನು ॥ ೩ ॥
ಸುತರಿಲ್ಲದವರಿಗೆ ಸದ್ಗತಿ ಇಲ್ಲವೆಂತೆಂಬ
ಕೃತಕಶಾಸ್ತ್ರವು ಲೌಕಿಕಭಾವಕೆ
ಕ್ಷಿತಿಯೊಳು ಕಾಗಿನೆಲೆಯಾದಿ ಕೇಶವ ಜಗ
ತ್ಪತಿಯ ಭಜಿಪಗೆ ಸದ್ಗತಿ ಇಲ್ಲದೋಗುವುದೆ ॥ ೪ ॥

9. ಕನಕನಾಯಕ

ರಾಗ – ಕೇದಾರಗೌಳ

ಜನನಿಯೆ ನನ್ನ ಜನ್ಮಸುಖ ಕಾರಣದೇವತೆಗಳ್ತಿಯಿಂದೆ ದೇ
ವನೆ ಕರುಣಾಸಮುದ್ರನೆ ಮಹೇಶನೆ ನಿನ್ನ ಸುಸನ್ನಿಧಾನದೊಳ್
ಘನತರ ಶಾತಿಯಂ ಕೊಡುವುದೆಂದುರೆ ಬೇಡುತ ಪಾಡುತಿರ್ಪೆನಾ
ನನವರತಂ ತ್ವದೀಯ ಮಹಿಮಾನ್ವಿತನಾಮದ ದಿವ್ಯಗೀತೆಯಂ.

---

ಎರಡನೇ ಅಂಕ ಒಂದನೇ ನೋಟ

10. ಜಂಗಮ

ರಾಗ – ಕಾನಡ, ಆಟತಾಳ

ದಯೆ ಇಲ್ಲದಾ ಧರ್ಮವದೇವುದಯ್ಯಾ ॥ ಪ ॥
ದಯೆಯೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ ॥ ಅ ॥

ದಯೆಯೇ ಧರ್ಮದ ಮೂಲ
ಕೂಡಲಸಂಗಯ್ಯ ಅಂತಲ್ಲದೊಲ್ಲನಯ್ಯ ॥ ೧ ॥

11. ಕನಕದಾಸ

ರಾಗ – ಕಾನಡ – ಅಟತಾಳ

ನಾನೇನುಬಲ್ಲೆ ನಿನ್ನ ನಾಮದ ಮಹಿಮೆ ॥ ಪ ॥
ಏನೆಂದು ಕೊಂಡಾಡಿಸ್ತುತಿಸಲಿ ನಿನ್ನ ॥ ಅ ॥
ಹರಿಮುಕುಂದನುನೀನು ನರಜನ್ಮಹುಳುನಾನು
ಪರಮಪಾವನನೀನು ಪಾಪಿಯುನಾನು ॥ ೧ ॥
ಪರಂಜೋತಿಯು ನೀನು ದುರುಳತರಳನುನಾನು
ಪರತರನು ನೀನು ಪಾಮರನು ನಾನು ॥ ೨ ॥
ಗರುಡಗಮನನೀನು ನೆರೆನಂಬಿದವನಾನು
ಸಿರಿಕಾಗಿನೆಲೆಯಾದಿ ಕೇಶವನು ನೀನು ॥ ೩ ॥

12. ಕನಕದಾಸ

ರಾಗ – ಕಲ್ಯಾಣಿ, ಆದಿತಾಳ

ಕಂಡೆ ಕಂಡೆನಾಗುರುದೇವನ ॥ ಪ ॥
ಧನ್ಯನಾದೆನಾ ಮಾನ್ಯನಾದೆ ಇಂದಿನ ॥ ಅ ॥
ಜ್ಞಾನರೂಪನಾದ ಘನಜ್ಯೋತಿಯನ್ನು
ಗುಣರಹಿತನಾದ ಮಾಯಾತೀತನನ್ನು
ಹೀನ ಕರ್ಮವಳಿದ ಸತ್ಯಚರಿತನನ್ನು
ಕನಸಿನೊಳ್ಕಂಡು ಕರೆವ ಮಹಾತ್ಮನ ॥ ೧ ॥

---

## ಮೂರನೇ ನೋಟ

13. ಪುರಂದರದಾಸ

ರಾಗ – ಕೇದಾರ, ಆದಿತಾಳ.

ಎನಗೆ ಆಣೆರಂಗ ನಿನಗೂ ಆಣೆ ಕೃಷ್ಣ ॥ ಪ ॥
ಎನಗೆ ನಿನಗಿಬ್ಬರಿಗೂ ನಿನ್ನ ಭಕ್ತರ ಆಣೆ ॥ ಅ ॥
ನಿನ್ನ ಬಿಟ್ಟನ್ಯರ ಭಜಿಸಿದರೆನಗಾಣೆ
ಎನ್ನನೀ ಕೈಬಿಟ್ಟುಪೋದರೆ ನಿನಗಾಣೆ ॥ ೧ ॥
ಕಾಕುಜನರ ಸಂಗಮಾಡಿದರೆನಗಾಣೆ
ಲೌಕೀಕವ ಬಿಡಿಸದಿದ್ದರೆ ನಿನಗೂ ಆಣೆ ॥ ೨ ॥
ಹರಿನಿನ್ನಾಶ್ರಯ ಮಾಡದೊಡೆನಗಾಣೆ
ಪುರಂದರವಿಠಲನೀನೊಲಿಯದಿದ್ದರೆ ಆಣೆ ॥ ೩ ॥

14. ಪುರಂದರದಾಸ

ರಾಗ – ಮೋಹನ, ಆದಿತಾಳ

ಹರಿದಿನದಲಿ ಉಂಡನರರಿಗೆ ಘೋರ–
ನರಕವು ತಪ್ಪದೆಂದು ಕೃತಿಸಾರುತಲಿದೆ ॥ ಪ ॥
ಗೋವುಕೊಂದ ಪಾಪ ವಿಪ್ರರಸಾವಿರ
ಜೀವಹತ್ಯವ ಮಾಡಿದ ಪಾಪವೂ
ಭಾವಜನಯ್ಯನ ದಿನದಿ ಉಂಡವರಿಗೆ
ಕೀವಿನೊಳಗೆ ಹಾಕಿ ಕುದಿಸುವ ಯಮನು ॥ ೧ ॥
ಒಂದೊಂದು ಅಗಳಿಗೆ ಕೋಟಿ ಕೋಟಿ ಕ್ರಿಮಿಗಳು
ಅಂದಿನ ಅನ್ನವು ನಾಯ್ಮಾಂಸವೂ
ಮಂದರೋದ್ಧಾರನ ದಿನದಿ ಉಂಡವರನ್ನು
ಹಂದಿಯ ಸುಡುವಂತೆ ಸುಡಿಸುವ ಯಮನು ॥ ೨ ॥
ಇಂತು ಏಕಾದಶಿ ಉಪವಾಸ ಜಾಗರ
ಸಂತತ ಕ್ಷೀರಾಬ್ಧಿಶಯನನ ಪೂಜೆ
ಸಂತುಷ್ಟಿಯಿಂದಲಿ ಮಾಡಿದ ಜನರಿಗ–
ತ್ಯಂತ ಫಲವೀವ ಪುರಂದರ ವಿಠಲಾ ॥ ೩ ॥

15. ಬ್ರಾಹ್ಮಣರು, ಕನಕ, ಪುರಂದರದಾಸ

ರಾಗ – [ಆದಿಬೀಜಏಕಲೆ, ಎಂಬಂತೆ]

ದೇವ ಕರುಣಾಕರ
ಕರಿಣಿಸುದೇವಹರಿ ಕೇಶವಾ ॥ ಪ ॥
ಹೇಜಗತ್ರಾತ ಪ್ರೇಮಭರಿತ ನಾಥ
ಸುಖದಾತ ಸುರವಂದಿತ –
ನೀನೇಸುಖದಾತ ಸುರವಂದಿತ॥
ಪರಿಹರಿಸೋನಮ್ಮ ದುರಹಂಕಾರ
ಪತಿತೋದ್ಧಾರ ಧೀರ ಸುವಿಚಾರ ಇಂದಿರಾವರ
ನೀನೆಸುವಿಚಾರ ಇಂದಿರಾವರ ॥ ೧ ॥

---

## ನಾಲ್ಕನೇ ನೋಟ

16. ಕನಕದಾಸ

ರಾಗ – ಮಾಂಡ್ ಅರ್ಧರೂಪಕತಾಳ

ತಲ್ಲಣಿಸದಿರು ಕಂಡ್ಯ ತಾಳುಮನವೆ ॥ ಪ ॥
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಅ ॥

ಬೆಟ್ಟದ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರು
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದರೆ
ಗಟ್ಯಾಗಿ ಸಲಹುವನು ಇದಕೆ ಸಂಶಯವೇ ॥ ೧ ॥
ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರು
ಪಡೆದ ಜನನಿಯತೆರದಿ ಸಂದೇಹವೆ
ಬಿಡದೆ ರಕ್ಷಿಪನಿದಕೆ ಸಂದೇಹವೆ ॥ ೨ ॥
ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರು ಯಾರು
ಬಲ್ಲಿದನು ಕಾಗಿನೆಲೆ ಆದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವೆ ॥ ೩ ॥

---

## ಐದನೇ ನೋಟ

### 17. ರೂಪಸುಂದರಿ.

ರಾಗ – ಮೋಹನ, ಆದಿತಾಳ

ಮೆಲ್ಲ ಮೆಲ್ಲನೆ ಬಂದನೆ ಗೋಪಮ್ಮ ಕೇಳೆ ॥ ಪ ॥
ಮೆಲ್ಲ ಮೆಲ್ಲನೆ ಬಂದು ಗಲ್ಲಕೆ ಮುದ್ದು ಕೊಟ್ಟು ನಿಲ್ಲದೆ ಓಡಿಹೋದ
ಕಳ್ಳಗೆಬುದ್ಧಿಪೇಳೆ ॥ ಅ ॥

ಹಾಲುಮಾರಲು ಪೋದರೆ ನಿನ್ನಯ ಕಂದ ಕಾಲಿಗಡ್ಡವಕಟ್ಟಿದ
ಹಾಲಸುಂಕವಬೇಡಿ ಕೋಲಲನೆ ಅಡ್ಡಗಟ್ಟಿ ಶಾಲೆಯಸೆಳಕೊಂಡು
ಹೇಳದೋಡಿದ ಕೃಷ್ಣ ॥ ೧ ॥

ಮೊಸರು ಮಾರಲುಪೋದರೆ ನಿನ್ನಯ ಕಂದ ಹೆಸರೇನೆಂದೆಲೆಕೇಳಿದ
ಹಸನಾದ ಹೆಣ್ಣಮೇಲೆ ಕುಸುಮವತಂದಿಕ್ಕಿ ಶಶಿಮುಖಿಯರಿಗೆಲ್ಲ
ಬಸುರು ಮಾಡಿದನೀತ ॥ ೨ ॥

ಹೋಗಿರೆ ರಂಗಯ್ಯನಮೇಲೆ ನೀವು ದೂರೇನು ಕೊಡುಬಂದಿರೆ
ಯೋಗೀಶ ಪುರಂದರವಿಠಲರಾಯನ ತೂಗಿಪಾಡಿರೆಬೇಗ
ನಾಗವೇಣಿಯರೆಲ್ಲ ॥ ೩ ॥

### 18. ಗೋವಿಂದಾಚಾರ್ಯ

ರಾಗ– ಆನಂದಭೈರವಿ. ಅಟತಾಳ

ಒಲ್ಲೆನೆ ವೈದಿಕಗಂಡನ ನಾ–
ನೆಲ್ಲಾದರು ಹೋಗಿ ಧುಮುಕುವೆನಮ್ಮ ॥ ಪ ॥

ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ. ಕಟ್ಟಿ ಸೀರೆಯ ನಾನುಡಲಾರನೆ
ಹಿಟ್ಟು ತೊಳಸಿ ರಟ್ಟೆಲ್ಲನೊಂದಾವು ಎಷ್ಟೆಂತಹೇಳಲಿ ಕಷ್ಟದ ಒಗೆತನ॥೧॥
ಊಟ ಮಾಡಿದ ಮೇಲೆ ಕೂಟದಚಿತ್ತಿಲ್ಲ ಕೊಟ್ಟರೆ ವೀಳ್ಯವನೊಲ್ಲೆನೆಂಬುವನೆ
ಧಾಟಿಯ ತೋರುತ ಶಿಷ್ಯ ಜನರಿಗೆ ಪಾಠವ ಹೇಳುತ ಕುಳಿತಹನಮ್ಮ॥೨॥
ನಿನ್ನಾಣೆ ಪುಸಿಯಲ್ಲ ಬಿನ್ನಣದ ಮಾತಲ್ಲ ಕಣ್ಣಸನ್ನೆ ಎಂಬುದು ಮೊದಲೇ ಇಲ್ಲ
ಮುನ್ನಿನಜನ್ಮದಿ ಪುರಂದರವಿಠಲನ ಚೆನ್ನಾಗಿ ಪೂಜೆಯಮಾಡಲಿಲ್ಲ ॥೩॥

## ಏಳನೇ ನೋಟ

19. ರೂಪಸುಂದರಿ

ರಾಗ– ಜಂಜೂಟಿ. ಆದಿತಾಳ

ಬಾರಯ್ಯಗೋಪಾಲ ಗೋಕುಲಬಾಲ ॥ ಪ ॥
ಬಾ ಎಂದು ಕರೆದರೆ ಬಿಂಕವಿನ್ಯಾಕೊ ॥ ಅ ॥
ಮುರಳಿನಾದವಗೈದು ಮರುಳು ಮಾಡಿದೆಯಲ್ಲೊ
ವಿರಹತಾಪದಿ ನಿನ್ನ ಚರಣಕೆ ನಮಿಸುವೆ ॥ ೧ ॥
ಪ್ರೇಮಸಾಗರನೆಂದು ಕಾಮಿಸಿದೆನು ನಿನ್ನ
ಭಾಮೆಯರೊಡಗೂಡಿ ಕಾಮಾಂಧನಾದೆಯಾ ॥ ೨ ॥

20. ರೂಪಸುಂದರಿ.

ರಾಗ– ಹಿಂದೂಸ್ತಾನಿ ತೋಡಿ. ಆದಿತಾಳ

ಜಯಜಯಮಂಗಳ ಜಯಕರುಣಾಳು ॥ ಪ ॥
ಜಯಶಂಭುಕರ ಜಯಗಿರಿಧಾರಿ ॥ ಅ ॥
ಜಯಜಗದೀಶ ಜಯಅವಿನಾಶ
ಜಯಸರ್ವೇಶ ಜಯಪರಮೇಶ ॥ ೧ ॥

## ಎಂಟನೇ ನೋಟ

21 ರೂಪಸುಂದರಿ

ರಾಗ – ಪಹಡಿ. ಆದಿತಾಳ

ಯಾತರ ಚೆಲುವ ನಮ್ಮರಂಗಯ್ಯಾ ॥ ಪ ॥
ಹರಿಯೆಂಬ ಮಾತಿಗೆ ಮರುಳಾದೆ ನಾನು ॥ ಅ ॥
ಬುದ್ಧಿಹೇಳುವ ಪಿತ ಉಳ್ಳೊಡೆ ಬೆಣ್ಣೆಯ
ಕದ್ದು ತಿಂದು ಚೋರನೆನಿಸುವನೆ
ಬದ್ಧ ವಾಹನ ತನಗೆ ಇದ್ದರೆ ಹಾರುವ

ಹದ್ದಿನಮೇಲೇರಿ ತಿರುಗವನೇರಂಗ ॥ ೧ ॥
ಮದನಜನಕತಾನು ಸೊಬಗುಳ್ಳನಾದರೆ
ಮುದುಕಿ ಕುಬುಜೆಯನು ಕೂಡುವನೆ
ಮುದದಿಂದ ತಾಪರದೈವವೆನಿಸಿಕೊಂಡ
ಚದುರ ಶ್ರೀಪುರಂದರ ವಿಠಲರಾಯ ॥ ೨ ॥

22. ಕನಕದಾಸ.

ರಾಗ – ಅಭೋಗಿ. ರೂಪಕ

ಹೊನ್ನು ಹೆಣ್ಣು ಮಣ್ಣು ಹೇಯವೆಂಬುವರಲ್ಲ ॥ ಪ ॥
ಹೇಯವೆಂಬುವುದುಂಟೆ ದೈವನಿರ್ಮಿತವಲ್ಲ ॥ ಅ ॥
ಹೊನ್ನೆಂಬುದು ದಾನ ಧರ್ಮದ ಮೂಲವು
ಹೆಣ್ಣೆಂಬುದು ನರಜನ್ಮದ ಮಾತೆಯು
ಮಣ್ಣೆಂಬುದು ಸರ್ವಜೀವರನೆಲೆಯು ॥ ೧ ॥
ಹೇಯವೆಂಬುವನುಡಿ ವಸ್ತುವಿಗಲ್ಲಯ್ಯ
ಹೇಯವೆಂಬುದಭಾವ ಬೇರಿಹುದಯ್ಯ
ನಾನು ನನ್ನದು ಎಂಬ ಗರ್ವದ ನುಡಿ ಹೇಯ
ನೀನು ನಿನ್ನದು ಎಂಬ ನುಡಿಯದು ಶ್ರೇಯ
ನಾನಂದುಕಂಡದ್ದು ಕೇಳಿದ್ದುದು ಹೇಯ ॥ ೨ ॥

---

ಒಂಬತ್ತನೇ ನೋಟ

23. ಕನಕದಾಸ.

ರಾಗ – ದೇಶಿ. ಅಟತಾಳ

ತನು ನಿನ್ನದು ಸ್ವಾಮಿ ಜೀವನ ನಿನ್ನದು ॥ ಪ ॥
ಅನುದಿನದಲಿ ಬಹಸುಖದು:ಖ ನಿನ್ನದು ॥ ಅ ॥
ಮಾಯಾಪಾಶದ ಬಲೆಯೊಳು ಸಿಲುಕಿದ
ಕಾಯಪಂಚೇಂದ್ರಿಯಗತಿ ನಿನ್ನದು
ಕಾಯಜಪಿತಕಾಗಿನೆಲೆಯಾದಿಕೇಶವ
ರಾಯನೀನಲ್ಲದೆ ನರರು ಸ್ವತಂತ್ರರೆ ॥ ೧ ॥

24. ರೂಪಸುಂದರಿ.

ರಾಗ – ಮಾಂಡ್. ಆದಿತಾಳ

ನೀನೆಬೇಡೆಂದರೆಬಾ ಎಂಬರ್‍ಯಾರೊ ॥ ಪ ॥
ಮನಮೋಹನಾಂಗಕೃಷ್ಣ ನಿನ್ನ ನಂಬಿದೆನು ॥ ಅ ॥
ಘನಪರ್ವತ ನೀನು ತೃಣಜೀವಿಯು ನಾನು
ದೀನದೀನಳು ರಕ್ಷಕ ನೀನು ತಾರೆಯು ನಾನು ॥ ೧ ॥

ವರಚಂದ್ರನುನೀನು ತಾರೆಯು ನಾನು
ಕರುಣಾಕರನೀನು ಶರಣೆಂಬೆ ನಾನು ॥ ೨ ॥

25. ರೂಪಸುಂದರಿ

ರಾಗ – ತಿಲಕ್ ಕಮೋದ್

ಪ್ರಿಯಬಾ ಬಾ ಮುದವತೋರು ॥ ಪ ॥
ಪ್ರೇಮಿಸಿದೆ ಮನದಿ ನಿನ್ನ ನವಮದನಾ ತಾಳಲಾರೆ ॥ ಅ ॥
ಸುಮಶರನ ಬಾಣದಿ
ಬೆಂದುಬಳಲಿ ಸೋತೆ ನಾನು
ಸುಮನೋಹರ ಸುಂದರಾಂಗ ॥ ೧ ॥

26. ಕನಕದಾಸ

ರಾಗ – ಕಲ್ಯಾಣಿ

ಸೀ॥ ಪರಪುರುಷನಲ್ಲಿ ನೀಸಿರಿಸುವೀ ಮೋಹವೆ
ತರುಣಿಯರನಿದು ನರಕಕೊಯ್ವದಾರಿ
ಪರಮಪುರುಷನೊಳು ನೀನಿರಿಸಿದಾ ಪ್ರೇಮವೆ
ವರಮುಕ್ತಿಯಂಕೊಡುವ ಭಕ್ತಿಲಹರಿ
ತಾಯೆ ಬಿಡುನೀನಿನ್ನು ಹೇಯವಾದೀಕೃತಿ
ಯಪಾಯಕರ ಉಭಯರಾತ್ಮೋದ್ಧಾರಕೆ
ಕಾಯಜನಕ್ರೀಡೆಗೀಕಾಯವೆನು ಕೊಡದೆಮಹ
ನೀಯರಾ ಸೇವೆಯನು ಮಾಡುವುದಕೆ
ತಾಯೆನೀನರ್ಪಿಸಿನ್ನವರ ಕೃಪೆಯಿಂದೆ
ಮಾಯದೀ ಮನ್ಮಥನ ಶರಬಾಧೆಯಳಿದು
ಶ್ರೇಯವದುಸಿದ್ಧಿಪುದಚಿರದೊಳು ನಿನಗೆ
ಕಾಯವನು ದೇವದೇವನು ನಿನಗೊಲಿದು॥

27. ಪುರಂದರದಾಸ

ರಾಗ, ಕಲ್ಯಾಣಿ ರೂಪಕತಾಳ

ನೀನಾದಯಾಳುನಿರ್ಮಲ ಚಿತ್ರಗೋವಿಂದ
ನಿಗಮಗೋಚರ ಮುಕುಂದ ॥ ಪ ॥
ಜ್ಞಾನಿಗಳರಸ ನೀನಲ್ಲದೆಜಗಕಿನ್ನು
ಮಾನದಿಂದಲಿಕಾದ ದೊರೆಗಳನಾಕಾಣೆ ॥ ಅ ॥
ಮಂದರಧರ ಅರವಿಂದಲೋಚನನಿನ್ನ
ಕಂದನೆಂದೆನಿಸೋಯನ್ನ

ಸಂದೇಹವೇಕಿನ್ನು ಸ್ವಾಮಿಮುಕುಂದನೆ
ಬಂದೆನ್ನ ಕಾಯೊ ಶ್ರೀಪುರಂದರವಿಠಲನೆ॥

---

**ಹತ್ತನೇ ಅಂಕ** **ಒಂದನೇ ನೋಟ**

**ರೂಪಸುಂದರಿ, ದಾಸರ ಶಿಷ್ಯರು.**

**ರಾಗ– ಮಧ್ಯಮಾವತಿ. ಝಂಪೆತಾಳ**

ಕಲಿಯುಗದ ಮಹಿಮೆಯನು ಕಂಡಷ್ಟುಪೇಳುವೆನು ॥ ಪ ॥
ಕಮಲನಾಭನ ಕೃಪೆಯ ಪಡೆದವರು ಕೇಳಿ ॥ ಅ ॥
ಸತ್ಯಧರ್ಮಗಳೆಲ್ಲ ಎತ್ತಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ
ಅರ್ಥಸಂಪನ್ನರಾಗವನುಭವಿಸುತಿಹರು॥
ಅತ್ತೆಯೆ ಸೊಸೆಯಾಗಿ ಸೊಸೆಯು ಅತ್ತೆಯು ಆಗಿ
ಪುತ್ರಪಿತನಾಗಿ ಪಿತಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಮಗೆದುರಿಲ್ಲವೆಂದು॥
ಅನ್ನ ವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನ ತಂತ್ರವಮಾಡಿ ಕೆಡಿಸುತಿಹರು
ಗನ್ನಗತಕನಮಾಳ್ಪ ಗ್ರಾಮಣ್ಯಗಳ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರಫಣಿಯಂತೆ॥
ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ
ಒಡೆದು ನೀನೇಬಲ್ಲೆ ಕಲಿಯುಗದಮಹಿಮೆ
ತಡವಮಾಡಲಿಬೇಡ ತಾಳಲಾರೆನು ಲೋಕ
ಮೃಡನವೈರಿಯಪೆತ್ತ ಆದಿಕೇಶವನೆ॥

**29. ಕನಕದಾಸ.**

**ರಾಗ – ಆನಂದಭೈರವಿ.**

ಕಣ್ಣಿಗಿಹ ಕಾಮನಾ ಬಣ್ಣಕನ್ನಡಿ ತೆಗೆದು
ನನ್ನಿ ನಲ್ಮೆಯಮನದ ಕಣ್ಣುತೆಗೆದು
ಹೆಣ್ಣುಗಳ ನೋಡೆ ಮುಕ್ಕಣ್ಣನರಸಿಯರೂಪು
ಹೆಣ್ಣಿನೊಳೆ ಕಾಣುವುದು ನಿಜವಿದಣ್ಣ

ನಿನ್ನದಲ್ಲದ ಹೆಣ್ಣ ಬಣ್ಣವನು ಮೋಹಿಸಲು
ಹುಣ್ಣಾಗಿ ಮೂಡುತಿಹುದೆದೆಯೊಳಣ್ಣಾ
ನಿನ್ನದೆನಿಸಿದ ಹಿತದಹೆಣ್ಣೆ ದೇವರಕೃಪೆಯ
ಹಣ್ಣಿದರಸವಿ ಜನ್ಮಸೌಖ್ಯವಣ್ಣಾ॥

30. ಕನಕದಾಸ, ಶಿಷ್ಯರು

ರಾಗ– ಹಿಂದುಸ್ತಾನಿತೋಡಿ. ಆದಿತಾಳ

ಜಯಪಾಂಡುರಂಗ ಗೋವಿಂದ ಜಯಪುಂಡರೀಕವರದ॥
ಜಯಗೋವರ್ಧನಗಿರಿಧಾರಿ ದೇವಹೇ ಕೇಶವ
ಭಯಸಾಗರದಾಟಿಸುಬೇಗ ॥ ೧ ॥
ಜಯವಾಸುದೇವಗೋಪಾಲ ಜಯವೇಣುನಾದಲೋಲ॥
ಜಯಗೋಕುಲಗೋಪಿಬಾಲ ದೇವಬಾಬೇಗನೆ
ತವದಾಸರ ಮೊರೆಯನುಕೇಳಿ ॥ ೨ ॥

ಮೂರನೇ ನೋಟ
ಕನಕದಾಸ.

ರಾಗ– ಅಸಾವೇರಿ. ಆದಿತಾಳ

ನಿನ್ನ ನಾಮವೊಂದಿರುತಿರೆ ಬೇರೊಂದುನಾಮವುಯಾಕಯ್ಯ ॥ ಪ ॥
ನೆಟ್ಟನೆ ದಾರಿಯು ಬಟ್ಟೆಯೊಳಿರುತಿರೆ ಬೆಟ್ಟವಬಳಸಲುಯಾಕಯ್ಯ
ಅಷ್ಟೈಶ್ವರ್ಯವುಮೃಷ್ಟಾನ್ನವಿರುತಿರೆ ಬಿಟ್ಟಕೂಳನು ತಿನ್ನಲ್ಯಾಕಯ್ಯ॥
ಎಲ್ಲವುಕರದೊಳಗಿರುತಿರೆ ಕಾಡಕಲ್ಲನು ಕಡಿಯಲು ಯಾಕಯ್ಯ
ಎಲ್ಲಿದನೆಲೆಯಾದಿಕೇಶವನಿರುತಿರೆ ಚಿಲ್ಲರದೈವದಹಂಗ್ಯಾಕೊ॥

ಕನಕದಾಸ

ರಾಗ– ಕಾಪಿ ಅರ್ಧರೂಪಕತಾಳ

ಕುಲಕುಲಕುಲವೆನ್ನುತಿಹರು ॥ ಪ ॥
ಕುಲಯಾವುದು ಸತ್ಯಸುಖವುಳ್ಳಜನರಿಗೆ ॥ ಅ ॥
ಕೆಸರೊಳುತಾವರೆ ಪುಟ್ಟಲು ಅದತಂದು
ಬಿಸಜನಾಭನಿಗೆ ಅರ್ಪಿಸಲಿಅವೆ
ಹಸುವಿನಮಾಂಸದೊಳುತ್ಪತ್ತಿಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ॥ ೧ ॥
ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ
ತೆಗೆದುಪೂಸುವರು ದ್ವಿಜರೆಲ್ಲರು

ಬಗೆಯಿಂದ ನಾರಾಯಣನಾವಕುಲವಯ್ಯ
ಜಗವಲ್ಲಭನಾವಕುಲ ಪೇಳಿರಯ್ಯ ॥ ೨ ॥
ಆತ್ಮಯಾವಕುಲ ಜೀವಯಾವಕುಲ
ತತ್ತ್ವೇಂದ್ರಿಯಗಳಕುಲ ಪೇಳಿರಯ್ಯ
ಆತ ಮಹಾತ್ಮನು ನೆಲೆಯಾದಿಕೇಶವ
ಯಾತರಕುಲವಯ್ಯ ಆತನೊಲಿದ ಮೇಲೆ ॥ ೩ ॥

33. ಕನಕದಾಸ

ರಾಗ– ಹಿಂದೂಸ್ತಾನಿತೋಡಿ. ಆಟತಾಳ.

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ? ॥ ಪ ॥
ನೀ ದೇಹದೊಳಗೊ ನಿನ್ನೊಳು ದೇಹವೊ? ॥ ಅ ॥
ಬಯಲೊಳಗೆ ಆಲಯವೊ ಆಲಯದೊಳುಬಯಲೊ?
ಬಯಲುಆಲಯವೆರಡು ನಯನದೊಳಗೊ?
ನಯನಬುದ್ಧಿಗಳೆರಡು ನಿನ್ನೊಳಗೊ ॥ ೧ ॥
ಸವಿಯೊಳಗೆ ಸಕ್ಕರೆಯೊ ಸಕ್ಕರೆಯೊಳು ಸವಿಯೊ?
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ?
ಜಿಹ್ವೆಮನಸಿನಒಳಗೊ ಮನಸಿನೊಳ್‌ಜಿಹ್ವೆಯೊ॥
ಜಿಹ್ವೆಮನಸುಗಳೆರಡು ನಿನ್ನೊಳಗೊಕೃಷ್ಣ ॥ ೨ ॥
ಕುಸುಮದಲಿಗಂಧವೊ ಗಂಧದಲಿಕುಸುಮವೊ?
ಕುಸುಮಗಂಧಗಳೆರಡು ಘ್ರಾಣದೊಳಗೊ?
ಅಸಮಭವಕಾಗಿ ನೆಲೆಯಾದಿಕೇಶವ
ಉಸುರಲೆನ್ನಳವಲ್ಲ ಎಲ್ಲಾ ನಿನ್ನೊಳಗೊ ಕೃಷ್ಣ ॥ ೩ ॥

34. ಕುಂಟಬಿಕ್ಷುಕ ನಾಲ್ಕನೇ ನೋಟ

ರಾಗ– ಅಸಾವೇರಿ. ಆದಿತಾಳ

ಎಲ್ಲಾರುಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥
ನೆಲ್ಲುಗಳ ಕಟ್ಟಿಕೊಂಡು ಬಿದ್ರುಗಳ ಹೊತ್ತುಕೊಂಡು
ಕೂಲಿನಾಲಿ ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥
ನಾಲ್ಕುವೇದಪುರಾಣ ಶಾಸ್ತ್ರಪಂಚಾಂಗ ಹೇಳಿ
ಕಾಲಕಳೆವುದೆಲ್ಲ ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥
ಬಡಿದುಬಡಿದು ಕಬ್ಬಿಣಕಾಸಿ ತುಬಾಕಿಮಾಡಿ
ಗುಂಡುಮದ್ದು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥
ಮುಂದೆಮುಂದೆ ಬಂಟರೆಲ್ಲ ಕತ್ತಿಡಾಲನ್ನೆ ಪಿಡಿದು
ಖಂಡತುಂಡು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥

ಸನ್ಯಾಸಿಜಂಗಮಜೋಗಿ ಜಟ್ಟಿ ಬೈರಾಗಿ
ನಾನವೇಷಕೊಂಬೊದೆಲ್ಲ ಹೊಟ್ಟೆಗಾಗಿ ಗೇಣುಬಟ್ಟೆಗಾಗಿ॥
ಉನ್ನತಕಾಗಿನೆಲೆ ಆದಿಕೇಶವನ
ಅನುದಿನ ನೆನೆವುದು ಭಕ್ತಿಗಾಗಿ ಪರಮುಕ್ತಿಗಾಗಿ॥

35. ಕನಕದಾಸ ಐದನೇ ನೋಟ

ಉದಯರಾಗ

ಬಾಗಿಲನುತೆರೆದು ಸೇವೆಯನು ಕೊಡು ಹರಿಯೆ ॥ ಪ ॥
ಕೂಗಿದರೂ ಧ್ವನಿಕೇಳಲಿಲ್ಲವೆ ನರಹರಿಯೆ ॥ ಅ ॥
ಪರಮಪದದೊಳಗೆ ವಿಷಧರನತಲ್ಪದಲಿ ನೀ
ಸಿರಿಸಹಿತ ಕ್ಷೀರವಾರಿಧಿಯೊಳಿರಲು॥
ಕರಿರಾಜಕಷ್ಟದಲಿ ಆದಿಮೂಲಎಂದು
ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥ ೧ ॥
ಕಡುಕೋಪದಿಂ ಖಳನು ಖಡ್ಗವನೆ ಪಿಡಿದು ನಿ
ನ್ನೊಡೆಯನೆಲ್ಲಿಹನೆಂದು ನುಡಿಯೆ॥
ದೃಢಭಕುತಿಯಲಿ ಶಿಶುವು ಬಿಡದೆನಿನ್ನನುಭಜಿಸೆ
ಸಡಗರದಿ ಸ್ತಂಭದಿಂದೊಡೆದೆ ನರಹರಿಯೆ ॥ ೨ ॥
ಯಮಸುತನರಾಣಿಗಕ್ಷಯವಸನವನಿತ್ತೆ
ಸಮಯದಲಿ ಅಜಮಿಳನಪೊರೆದೆ॥
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷಕಾಗಿನೆಲೆಯಾದಿ ಕೇಶವನೆ ॥ ೩ ॥

36. ಎಲ್ಲರು ಮಂಗಳ

ರಾಗ – ಶ್ರೀರಾಗ ಆದಿತಾಳ

ಜಯತುಜಯತುಮಂಗಳಂ ಜಯತುಜಯತುಮಂಗಳಂ ॥ ಪ ॥
ಜಯಶುಭಾಂಗಮಂಗಳಂ ಜಯಅಭಂಗಮಂಗಳಂ ॥ ಅ ॥
ಜಯರಮೇಶಮಂಗಳಂ ಜಯಸುರೇಶ ಮಂಗಳಂ
ಜಯಮುಕುಂದ ಮಂಗಳಂ ಉಡುಪಿಕೃಷ್ಣ ಮಂಗಳಂ॥ ೧ ॥

** * ** * **

## ನಾ ಕಂಡಂತೆ

## ಮೂಲ ಆವೃತ್ತಿಯ ಬೆನ್ನುಡಿ

ಶ್ರೀಯುತ ಜೋಳರದಾಸಿ ಕೆ. ದೊಡ್ಡನಗೌಡರು ಶ್ರೀಮಂತ ಕೃಷಿಕರ ಮನೆಯಲ್ಲಿ ಹುಟ್ಟಿದರೂ ಅವರು ಚಿಕ್ಕಂದಿನಿಂದಲೂ ಮಾಡಿದ ಕೃಷಿಯೇ ಬೇರೆ, ಅತಿ ಚಿಕ್ಕಂದಿನಲ್ಲಿಯೇ ನಾಟ್ಯಕಲಾ ಪ್ರಪೂರ್ಣ ಶ್ರೀ ರಾಘವರ ಪ್ರಭಾವಕ್ಕೆ ಸಿಕ್ಕು ತಮ್ಮ ಜೀವಮಾನದ ಬಹುಭಾಗವನ್ನು ನಾಟಕ, ಸಂಗೀತ, ಗಮಕ, ಸಾಹಿತ್ಯ, ಕಲೆಗಳ ಸೇವೆಗಾಗಿಯೇ ಮೀಸಲಾಗಿರಿಸಿದ್ದಾರೆ. ನಾಟ್ಯಸರಸ್ವತಿಯ ಸೇವೆಯಲ್ಲಿ ತೊಡಗಿದ ಅವರಿಗೆ ವಾಗ್ದೇವಿಯ ಕೃಪೆಯಾಗಿ ಕಾವ್ಯಶಕ್ತಿಯೂ ಉಂಟಾಯಿತು. 'ರಸವರ್ಷ', 'ನಮ್ಮ ಹಂಪೆ', ಮುಂತಾದ ಭಕ್ತಿಗೀತೆ, ಭಾವಗೀತೆಗಳನ್ನು ರಚಿಸಿ ಪ್ರಕಟಿಸಿದರು. 'ಕ್ರಾಂತಿಪುರುಷ ಬಸವಣ್ಣ' 'ಕನಕದಾಸ' ಮುಂತಾದ ನಾಟಕಗಳನ್ನು ರಚಿಸಿದರು. "ದ್ಯೂತಧರ್ಮ ರಹಸ್ಯ" ಎಂಬ ಭಾಮಿನೀಷಟ್ಪದಿ ಕಾವ್ಯವನ್ನು ರಚಿಸಿದ್ದಾರೆ. ಶ್ರೀ ರಾಘವ ಅವರ ಜೀವನ ಚರಿತ್ರೆಯನ್ನೂ ಬರೆದು ಮುಗಿಸಿದ್ದಾರೆ. ಶ್ರೀ ದೊಡ್ಡನಗೌಡರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಇಷ್ಟೇ ಅಲ್ಲದೆ, ಆಂಧ್ರ ಕರ್ನಾಟಕ ರಾಜ್ಯಗಳಲ್ಲಿ ಶ್ರೀ ದೊಡ್ಡನಗೌಡರು ಶ್ರೇಷ್ಠ ನಟರೆಂದು ಶಾಶ್ವತವಾದ ಸ್ಥಾನವನ್ನು ಪಡೆದಿದ್ದಾರೆ. ಅದಕ್ಕಿಂತಲೂ ಹೆಚ್ಚಾಗಿ, ಅವರು 'ಗಮಕಕಲಾನಿಧಿ' ಎಂದು ಕನ್ನಡ ಗಮಕಕಲಾ ಇತಿಹಾಸದಲ್ಲಿ ಅತಿಶ್ರೇಷ್ಠ ಸ್ಥಾನವನ್ನು ಶಾಶ್ವತವಾಗಿ ಸ್ಥಾಪಿಸಿಕೊಂಡಿದ್ದಾರೆ. ಅವರು ತಮ್ಮ ಶ್ರೀಮಂತ ಕಂಠದಿಂದ, ಸಾಹಿತ್ಯಾ ಭಾಸ್ಯದಿಂದ, ನಾಟನಾಚಾತುರ್ಯದ ಅನುಭವದಿಂದ ಗಮಕಕಲೆಗೆ ಒಂದು ವಿಶಿಷ್ಟ ಮೆರಗನ್ನು ಕೊಟ್ಟು, ಕಾವ್ಯವಾಚನ ಸಹೃದಯ ಸೃಷ್ಟಿಗೆ ಹೇಗೆ ನೆರವಾಗಬಲ್ಲುದೆಂಬುದನ್ನು ಸಜೀವವಾಗಿ ತೋರಿಸಲು ಸಮರ್ಥರಾಗಿದ್ದಾರೆ.

ಶ್ರೀ ಗೌಡರ ಈ ನಾಟಕ ಅವರ ನಾಟಕಾಭಿನಯದ ಅನುಭವವನ್ನು ಗಮಕದ ಪರಿಣತಮೆಯನ್ನು ಎರಕಹೊಯ್ದು ಸೃಷ್ಟಿಸಿದ ಕಲಾಕೃತಿ. ಇದು ಅಭಿನಯಕ್ಕೂ, ಹಾಡಿಕೆಗೂ ಓದಿಗೂ ಹೊಂದಿಕೊಳ್ಳುವ ಸರಳ, ಸುಂದರ ಕೃತಿ. ಇದರಿಂದ ಕನ್ನಡ ನಾಟಕ ಕ್ಷೇತ್ರ ಶ್ರೀಮಂತವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.

– ಕೋ. ಚೆನ್ನಬಸಪ್ಪ.